ಗುಬ್ಬಿಗೂಡೆ

ಲೋಕೇಶ್ ಊರುಬೈಲು

ಪ್ರಥಮ ಮುದ್ರಣ : 2015

ಹಕ್ಕುಗಳು : ಲೋಕೇಶ್ ಊರುಬೈಲು

ಬೆಲೆ : 100/-

ಮುಖಪುಟ : ಬಾಸುಮ ಕೊಡಗು

ಮುಖಪುಟ ರೇಖಾಚಿತ್ರ : ಗೂಗಲ್ ಕೃಪೆ

ಮುದ್ರಣ : ಶ್ರೀ ವಿನಾಯಕ ಪ್ರೆಸ್
ಅಂಚೆ: ಸಂಪಾಜೆ –574234
ದೂರವಾಣಿ : 08257–266287
Email : shreevinayakapress@gmail.com

# ಅರ್ಪಣೆ

*ಹೆತ್ತಯ್ಯೆನ ಮೊಲೆಹಾಲ್‌ನಷ್ಟೇ ಸಾರ, ಸತ್ವ ಇದ್ದ್, ಪೊರ್ಲುನ ಅರೆಭಾಷೆನ ಕೊಂಡಾಟಲಿ ಮಾತಾಡ್ವ ಮತ್ತೆ ಬೆಳ್ಸುವ... ಒಳ್ದವ್ಕೆ ತಿಳ್ಸವ; ಅಲ್ಲದೆ ಬೊದ್ಕುನೊಟ್ಟಿಗೆ ಬೊದ್ಕುನ ಒಂದ್ ಭಾಗನೇ ಆಗಿ ಹೋದ ಈ ಭಾಷೆನ ಪೊಂತುವ ನನ್ನ ಎಲ್ಲ ಅರೆಭಾಷೆ ಬಂಧುಗಳ ಪಾದದಡಿಗೆ ಗುರುವೀಳ್ಯದ ಸಮೇತ ಈ ಕಾಣಿಕೆ.*

# ಸುರೂಗೆ ಎರ್ಡ್ ಮಾತ್....

ಮೊನ್ಷಂಗೆ ಯೋಗ ತೊಪ್ಪಿರೆ ಯೋಗ್ಯತೆ ಈ ಎರ್ಡರ್ಲಿ ಒಂದಾರ್ ಬೇಕಡ. ಅಂತದರ್ಲಿ ನನ್ನಂತವನ ಗುರ್ತ ಪರ್ಚಯನೇ ಇಲ್ಲದೆ ಯಾಗಾರ್ ಅಮಾಸೆಗೊಮ್ಮೆ, ಹುಣ್ಣಿಮೆಗೊಮ್ಮೆ ರೇಡ್ಯಲಿ ನನ್ನ ಕೆಲೊವು ಅರೆಭಾಷೆ ಕಥೆ ಪರ್ಸಂಗಗಳ ಕೇಳಿ ಕುಸಿಪಟ್ಟ್ "ಈ ಹೈದ ಬರ್ದದರ ಪುಸ್ತಕ ರೂಪಲಿ ಇಳ್ಸಿ ಬೆಳ್ಸೊಕು ತೇಳಿ"; ಕರಿಕತ್ತಲೆಲಿ ಎಡ್ಗೆಂಡ್ ನಡ್ಕಂಡ್ ಹೋತಿದ್ದವಂಗೆ ಕೈಗೊಂದ್ ದೊಂದಿ ಬೊಳ್ಪುನ ಕೊಟ್ಟ್ ದಾರ್ಯೊಟ್ಟಿಗೆ, ಬೊಳ್ಪುನೂ ತೋರ್ಸಿ, ಬೊರ್ಕ್ನ ಗೋಣಿಲಿ ಉಸ್ರ್ ಎಳೆಕಾಗದಾಂಗೆ ಬಿಗ್ದ್ ಬಾಯ್ಕಟ್ಟಿಸಿದ ಹೊಗೆ ಹಿಡ್ದ್, ಒರ್ಲೆ ತಿಂದ್ ಬರ್ವ ಅರ್ಕಿಲ್‌ಗಾಕನ ಚೂಟ್‌ಮೊರ್ಣ್ನ ಕಳ ಸೇರ್ತಿದ್ದ ನನ್ನ ಕೈಬರಕ್ಕೆ ಮೋಕ್ಷ ಕೊಡ್ಸಿ, ಪೊರ್ಲುಲಿ ಪುಸ್ತಕ ರೂಪಕ್ಕೆ ಇಳ್ಸಿದ ಕಲ್ಲುಗುಂಡಿನ "ಶ್ರೀ ವಿನಾಯಕ ಪ್ರೆಸ್"ನ ಯಜ್ಮಾನ್ರಾದ 'ಅಣ್ಣ ಗಂಗಣ್ಣಂಗೆ' ಎದೆಬೊಗ್ಗ್‌ಸಿ ನಮುಸ್ಕಾರ ಮಾಡಿ ಸುರೂಗೆ ಅವರ ನೆನ್ಸಿಕಣೆ. ನಾ ಈ ಪುಸ್ತಕಕ್ಕೆ ಬೆರಿ ನೇವನ ಮಾತ್ರ. ಇದರ ಜೀವ ಮತ್ತೆ ಜೀವನ "ಶ್ರೀ ವಿನಾಯಕದವು". ಹಾಂಗೆನೇ ನನ್ನ ಕಕ್ಕೆ ಕಾಲ್‌ನಾಂಗಿದ್ದ ಬರನ ಮೂರ್ನಾಕ್ ಸರ್ತಿ ಮೋರೆಲಿ ಏನೂ ಬೇಜರ ತೋರ್ಸಿಕಣದೆ ನೆಗಾಡಿಕಂಡೇ ತೊಪ್ಪುಗಳ ಸೆರಿ ಮಾಡಿ, ಮಾಡಿ, ಕಂಗಾಲಾಗಿ ಅಕೇರಿಗೊಂದ್ ರೂಪಕ್ಕೆ ಬರ್ಸಿದ "ಶ್ರೀ ವಿನಾಯಕ ಪ್ರೆಸ್‌ನ ಪೊರ್ಲುನ ಇಬ್ಬೊರು ಬೆರ್ಳಚ್ಚ್ ತಜ್ಞರ್‌ಗಳ ನೆನ್ಸಿ ಕೈ ಮುಗ್ದನೆ. ಹಾಂಗೆನೇ ಈ ಪೊರ್ಲುನ ಅಚ್ಚಿಗೆ ಲ್ಯಾಕ್‌ನ ಮುಖಪುಟನ ವಿನ್ಯಾಸ ಮಾಡಿಕೊಟ್ಟು ಈ ಪುಸ್ತಕಕ್ಕೆ ಅಂದ-ಚಂದನ ಮಾಡಿಕೊಟ್ಟ ಗುರುಸಮಾನ, ಅಣ್ಣನ ಸಮಾನರಾದ ಶ್ರೀಯುತ ಬಾಸುಮ ಕೊಡಗುರವರ ನೆನ್ಸಿಕಣೆ.

ನಾ ಬರ್ದ ಅರೆಭಾಷೆ ಕಥೆಗಳ ನೋಡಿ ನಂಗೆ ತುಂಬಾ ಹುರ್ಪು ಕೊಟ್ಟ್ ಬೆನ್ನ್‌ತಟ್ಟಿ ನನ್ನ ಬರಗಳ ನಾಕ್‌ಜನಕ್ಕೆ ಮುಟ್ಟುವಾಂಗೆ ಮಾಡಿ; ಜನ ನನ್ನ ಗುರ್ತ ಮೊಡ್ಡುಗ್ಗವಾಂಗೆಮಾಡ್ದ ನನ್ನ ಆಕಾಶವಾಣಿ ಮಡ್ಕೇರಿಗೆ, ಹಾಂಗೆನೇ ನಂಗೊಂದ್ ಅವಕಾಶ ಕೊಟ್ಟ್ ನನ್ನ ಬೆಳ್ಸಿದ ಶ್ರೀಮಾನ್ ಸುಬ್ರಾಯ ಸಂಪಾಜೆ, ಶ್ರೀಮತಿ ಶಾರದಾ ನಂಜಪ್ಪ ಮತ್ತೆ ಆಕಾಶವಾಣಿನ ಎಲ್ಲ ಸಿಬ್ಬಂದಿ ವರ್ಗದವರ ತುಂಬಿದೆದೆಲಿ ನೆನ್ಸಿಕಂಡ್; ನನ್ನ ಕಥೆ ಕವನಗಳ ಕೇಳಿ ಕುಸಿಪಟ್ಟ್ ನೆಂಪುಲಿ ಹೊಗ್‌ಳಿ ಕಾಗದ ಬರೆತಿದ್ದ ದೂರ ದೂರದೂರ್ಲಿದ್ದ ನನ್ನ ಎಲ್ಲಾ ಸಿನೇತ ಬಂಧುಗಳಿಗೂ ಕೂಡಾ ಎದೆ ಬೊಗ್ಗ್‌ಸಿ ನಮಸ್ಕಾರ ಹೇಳ್ನೆ. ನನ್ನೊಟ್ಟಿಗೆ "ನೀ ಅರೆಬಾಷೆಲಿನೇ ಬರಿಯಕಣ್ಣಾ" ತೇಳಿ ನನ್ನ ಬರವಣಿಗೆನ ಮನ್ಸ್, ಮನ್ಸ್‌ಗಳಿಗೆ ಮುಟ್ಟ್‌ಸಿಕೆ ನಂಗೆ ಸಾಯ

ಮಾಡ್ದ ನನ್ನ ಗುರು ರೂಪದವಾದ ಶ್ರೀ ಬಾರಿಯಂಡ ಜೋಯಪ್ಪ ಮಾಷ್ಟ್ರು, ಶ್ರೀ ಪಟ್ಟಡ ಶಿವಕುಮಾರ್ ಮತ್ತೆ ಶ್ರೀಮಾನ್ ಎನ್.ಎಸ್.ದೇವಿಪ್ರಸಾದ್ ಸರ್ ಸಂಪಾಜೆ ಇವರ ಮನ್ಸ್ ತುಂಬಿ ನೆನ್ನಿಸಿಕಣೆ.

ನನ್ನ ಶಾಲೆ ಕಾಲೇಜ್‌ನ ದಿನಗಳ್ಲಿ ನಂಗೆ ತುಂಬಾ ಪ್ರೋತ್ಸಾಹ, ಹುರ್ಪುನ ಕೊಟ್ಟ್; ಶಾಲೆಲಿ ನಡಿವ ಪ್ರತಿಒಂದ್ ಚಟ್ವಟಿಕೆಗಳ್ಲಿ ಕೂಡಾ ನನ್ನ ಹೆಸ್ರ್‌ನ ಮುಂದೆ ತರ್ಸಿ, ಬೊಗ್ಗಿ ಬೆಂಡಾಗಿ ತುಂಡಾಕೆ ಆದ ದೈನ ಸೊರ್ತ‌ಮಾಡಿ ಅದ್ಕೊಂದ್ ರೂಪಕೊಟ್ಟ್, ಊಂದ ಕೊಟ್ಟ್ ನಿಲ್ಸಿ ಬೆಳ್ಸಿದ ನನ್ನ ಊರುಬೈಲು ಮತ್ತೆ ಸಂಪಾಜೆ ಪದವಿ ಪೂರ್ವ ಕಾಲೇಜ್‌ನ ನನ್ನ ಎಲ್ಲಾ ಗುರುಗಳ ಪಾದಕ್ಕೆ ತಲೆಬೊಗ್ಗ್‌ಸಿ ನಮಸ್ಕಾರ ಮಾಡಿಕಂಡ್ ಅವರ ಆಶೀರ್ವಾದನ ಬೇಡಿಕಣೆ.

ಭೂಮಿಗೆ ಬಿದ್ದಲ್ಲಿಂದ ಇಲ್ಲಿವರೆಗೆ ನಂಗೆ ಉರ್ಗಿ ಉರ್ಗಿ ಉಗ್ಗು ಊಡ್ಸಿ ಕಷ್ಟನೋ.. ಸುಖನೋ.. ಬೆಳ್ಸಿ ಬೊಳ್ಪು ಕೊಟ್ಟ್ ನಂಗೆ ಅರೆಭಾಷೆನ ಕಲ್ಸಿದ, ಜನ್ಮ ಕೊಟ್ಟ ನನ್ನ ಅಪ್ಪಂಗಯ್ಯೆಗೂ... ಅಲ್ಲದೆ ಮಾತಾಡ್ವ ಮತ್ತೆ ಬರಿವ ಅರೆಭಾಷೆಲಿ ಕೆಲೊವು ಮೂಲಪದಗಳ ನಂಗೆ ಪರ್ಚಯ ಮಾಡ್ಸಿದ ನನ್ನ ಊರ್‌ನ ಎಲ್ಲ ಹಿರೀಜೀವಂಗ; ಅಜ್ಜಪ್ಪ-ಉಗ್ಗವ್ವಂದರ ಕಾಲಿಡ್ಕಂಡ್....

ಅರೆಭಾಷೆಗೆ ಅದರ್ದೇ ಆದ ಇತಿಹಾಸ, ಗೌಜಿ, ಗಮ್ಮೊತ್ತ್, ಗತ್ತ್, ಪೌರು ಉಟ್ಟು. ಇಂದ್‌ನ ದಿನಗಳ್ಲಿ ಅರೆಭಾಷೆ ಮಾತಾಡ್ವ ಜನಂಗಳೇ ಅದರ ಮಾತಾಡಿಕೆ ಹಿಂದೆ ಮುಂದೆ ನೋಡ್ವೆ, ದಯಮಾಡಿ ಒಂದ್ ಬಾಷೆತೇಳುವಂತದ್ ಎಲ್ಲೊವು ದಾಟಿ ಹೋವ ಸೇತುವೆ ಆಕು ಹೊರತು ಅದೊಂದು ದಡ್ಡ್ ಹಿಡ್ದ ಉಳಿಯ ಆಕೆ ಆಗದ್. ಹಾಂಗಾಗಿ ಯಾದೇ ಒಂದ್ ಬಾಷೆ ಬೆರಿ ಒಂದ್ ಜನಾಂಗಕ್ಕೆ, ಅಥವಾ ಒಂದ್ ಪ್ರದೇಶಕ್ಕೆ ಒಗ್ಗ್‌ಸಿಕಣದೆ ಅದ್ ಎಲ್ಲ ಕಾಲಕ್ಕೂ ಎಲ್ಲೊವ್ಕೂ ಮುಟ್ಟಿ, ಎಲ್ಲರ ಎದೆ ಒಳಗೆ ಹೋದರೆ ಮಾತ್ರ ಆ ಭಾಷೆ ಬೆಳ್ದದೆ. ಭಾಷೆ ಬೆಳ್ದರೆ ಮಾತ್ರ ಆ ಪ್ರದೇಶದ ಆಚಾರಗ, ಆಚರ್ಣೆಗ, ವಿಚಾರಗ, ಸಂಸ್ಕೃತಿ ಸಂಪ್ರ್‌ದಾಯಗ, ಮುಂದೆಗೆ ಹರಿವ ನೀರ್ನಾಂಗೆ ಹೋತಾ ಇದ್ದದೆ. ಹಾಂಗೆ ಹರ್ಕಂಡ್ ಹೋತಾ ಇರ್ಕನ ನಾವುಗ ನಮ್ಮನಮ್ಮೊಳೆಗೆನೇ ಅದ್ಕೆ ಕಟ್ಟ ಕಟ್ಟಿಕಂಡ್, ನಮ್ಮ-ನಮ್ಮಲ್ಲಿನೇ ಬೇದ ಮಾಡಿಕಂಡ್, ಬಾಗ ಮಾಡಿಕಂಡ್ ಇದ್ದರೆ ಕಾಲ ಕಳ್ದ್‌ಹೋದೇ ಹೊರತು ಕಟ್ಟಿ ಬೆಳ್ಸಿಕಾದುಲೆ. ಹಾಂಗಾಗಿ ಬಾಷೆ ಯಾಗೋಳು ನಿರಂತರ ಆಗಿ ಮೂಲ ಭಾಷೆಲಿ ಸಾಹಿತ್ಯಗ, ಜನಪದಗ ಸುಷ್ಣೆ ಆದರೆ ಮಾತ್ರ ಅದ್ ಮಾರ್‌ಂದ ತಲೆಮಾರ್ಗೆ ಮುಟ್ಟ ಹೋದೆ. ಅದ್ಕಾಗಿ

ನಾ ನಮ್ಮ ಅರೆಭಾಷೆನ ಮಾತಾಡ್ವ ಎಲ್ಲ ಜನಂಗಳ್ಲಿ ಕೈ ಮುಗ್ದ್ ಬೇಡಿಕಣೆ; ಭಾಷೆ ಯಾರೊಬ್ಬನ, ಯಾರಪ್ಪನ ಸೊತ್ತಲ್ಲ. ಭಾಷೆಗೆ ಜಾತಿನ ಚೌಕಟ್ಟ್ ಹಾಕದೆ, ಅರೆಭಾಷೆಲಿ ಮಾತಾಡವರ, ಬರೆವರ, ಹೊಸಹೊಸ ಸಾಹಿತ್ಯಗಳ ಸೃಷ್ಠಿ ಮಾಡ್ದರ ಒಟ್ಟೊಟ್ಟಿಗೇ ಅರೆಭಾಷೆ ಮಾತಾಡಿಕೆ ಬರದವ್ಕೆ ಕಲ್ಸಿ ಕೊಡ್ದರೊಟ್ಟಿಗೆ ಅದರ ಮಾತಾಡಿಕೆ ಯಾದೇ ತರದ ಹೇಸಿಕೆ ಮಾಡಿಕಣದೆ ನಮ್ಮ ಹೆತ್ತಯ್ಯೆ ಹೇಂಗೆ ನಾವ್ಗೆ ಉಗ್ಗು ಕೊಟ್ಟ್ ಪೋಂತಿ ಸಾಂಕಿದಾಂಗೆ ಎಲ್ಲೊವು ಸೇರಿ ನಮ್ಮ ಭಾಷೆನ ಒಳ್ಸಿ ಬೆಳ್ಸನೊ.

ನಮ್ಮ ಗಂಗಣ್ಣಂಗೆ ಅರೆಭಾಷೆ ಬಗ್ಗೆ, ಸಂಸ್ಕೃತಿ, ಸಂಪ್ರದಾಯದ ಬಗ್ಗೆ ಇರ್ವ ಕಾಳಜಿ ಹುರ್ಪು ನೇ ನಮ್ಮಂತವ್ಕೆ ಇರುವ ಒಂದೊಂದ್ ಬೊಳ್ಪುನ ಕಂಡಿ.! ಅವು ನಂಗೆ ಯಾವತರ ಪ್ರೋತ್ಸಾಹ ಮಾಡ್ಯಳೋ ಇದೇ ಪ್ರೋತ್ಸಾಹ ಮತ್ತೆ ಉತ್ಸಾಹ ಅರೆಭಾಷೆಲಿ ಬರಿವ ಎಲ್ಲೊವರ ಮೇಲೆ ಇರ್ಲಿ, ಅವರ ಸಂಸ್ಥೆಂದ ನೂರ್, ಸಾವಿರ ಒಳ್ಳೊಳ್ಳ ಪುಸ್ತಕಗ ಜನಂಗಳಿಗೆ ಸಿಕ್ಕುವಾಂಗಾಗಲಿ ಅಂತ ಬೇಡಿಕಂಡ್ ಅರೆಭಾಷೆ ಕನ್ನಡದ ಒಂದ್ ರೂಪಾಂತರ ಭಾಷೆ. ಅದ್ಕೆ ಅದರ್ದೇ ಆದ ಸೊಂತ ಲಿಪಿ ಇಲ್ಲೆ. ಅರೆಭಾಷೆಲಿ ಮಾತಾಡ್ದಷ್ಟ್ ಸುಲ್ಬ ಬರೆಕೆ ಮತ್ತೆ ಓದಿಕೆ ಆಲ್ಲೆ. ಆದನ್ರೂ ಇಲ್ಲಿರ್ವ ಕಥೆಗಳ್ಲಿ ಕೆಲೊವು ನಮ್ಮ ಸಮಾಜಲಿ ಯಾದೋ ಒಂದ್ ಗಳ್ಗೆಲಿ ನಡ್ದೋದ ಕೆಲೊವು ಸಣ್ಣ-ಸಣ್ಣ ಸಂಗತಿಗಳ ನೆಂಪಿಸಿಕಂಡ್ ಅದ್ಕೆ ನಂದೇ ಆದ ರೂಪ ಮತ್ತೆ ಮುಕ್ತಾಯ ಕೊಟ್ಟ್ ಬರ್ದಳೆ. ಈ ಕಥೆಗಳ ಅರೆಭಾಷೆ ಮಾತಾಡ್ದಾಂಗೆನೇ ಓದಿಕೆ ಪ್ರಯತ್ನ ಮಾಡಿಕಂಕುಂತ ಬೇಡಿಕಂಡ್ ನನ್ನ ಎಲ್ಲಾ ಗುರು-ಹಿರೆವು; ಸಿನೇತ-ಸಿನೇತೆ; ನೆರೆಕರೆ-ನೆಂಟ್ರಗಳೂ ಅಲ್ಲದೆ ಎಲ್ಲ ಅರೆಭಾಷೆ ಅಭಿಮಾನಿಗಳಿಗೆ ಈ ನಿಮ್ಮ ಮನೆ ಹೈದನ ಪಿರೂತಿನ "ಗುಬ್ಬಿ ಗೂಡೆನ" ನಿಮ್ಮ ಕೈಗಿಸಿ ಧಾರೆ ಎರ್ದ್ ಕೊಡ್ತಾ ಒಳೆ. ದಯಮಾಡಿ ಪೊರ್ಲುಲಿ ಸಾಂಕಿ ತಪ್ಪುಗಳ ಬುಟ್ಟ್ ಒಪ್ಪು ಮಾಡಿಕಂಡ್ ನಿಮ್ಮ ಅಭಿಪ್ರಾಯನ ತಿಳ್ಸೊಕೂಂತ ಕೇಳಿಕಂಡ್; ನಿಮ್ಮ ಒಂದ್ ನೆಗೆ, ಎರ್ಡ್ ಮಾತ್‌ಗಳ್ಗಾಗಿ ದಾರಿ ನೋಡಿಕಂಡಿರ್ವ.....

ನಿಮ್ಮ ಮನೆ ಹೈದ

**ಲೋಕೇಶ ಊರುಬೈಲು**

ಸ್ಥಳ : ಬೆಂಗಳೂರು
ಜೆ.ಪಿ.ನಗರ

ಮೊಬೈಲ್ : 9611355496

# ಪ್ರಕಾರಲಿ...

# ಕೆಂದಾಳೆ

"ಅವ್ವಾ...ಓ...ಅವ್ವಾ..... ಒಂದು ಕೋಳಿ ಕೊಲ್ಲಕಾಯ್ತಲ್ಲವ್ವಾ....! ಊರ್‌ಕೋಳಿ ತಿನದೆ ಸುಮಾರ್ ಕಾಲ ಆತ್. ಹೂಂಜಂಗಳ ನೋಡ್ಕನ ಬಾಯಿಲಿ ಯಾಕೋ ನೀರ್ ಬಾಕೆ ಸುರಾದೆ ಅವ್ವಾ..... ಕೊಲ್ಲಮೊನಾ.....?" ಅಂತ ನೆಂಟ್ರಮನೆಲಿ ಸಾಲೆಗೋಕೆ ಇದ್ದ್‌ಕಂಡ್ ಸಿಕ್ಕಿದ ಎರ್ಡ್ ದಿನದ ರಜೆಲಿ ಅಯ್ಯೆ-ಅಪ್ಪನ ನೋಡಿಕಂಡ್ ಹೋಕೆ ಬಂದ ಗೋಪಾಲ ಹೈದ ಅಯ್ಯೆನ ಸುತ್ತ್-ಸುತ್ತ್ ಹೋತಿತ್ತ್.

"ಹ್ಞೂಂ.... ಕೋಳಿ ಅಲ್ಲ ನಿಂಗೆ ಸೌದೆ ಕೊಳ್ಳಿ. ನಿನ್ನೆ ಮೀನ್ ತಿಂದದ್, ಮನ್ನೆನೂ ಕೋಳಿ.., ಏನ್ ಮಾಸತೇಳ್ರೆ ಸತ್ತಿಯನಾ ಹೇಂಗೆ? ಬಾಯೆಲಿ ತಾನೆ ನೀರ್ ಬಂದದ್, ಸರ‍್ರಲಿ ಅಲ್ಲಲ್ಲ..? ಮೊದ್ದುಗೆ ಇಸಿಕಂಡಾಂಗೆ ಎರ್ಡ್ ಹೂಂಜಂಗಳ ಇಸಿಕಂಡದ್. ಅದನ್ನೂ ಕೊಂದ್ ತಿನನೋಂತೇಳ್ರೆ ನಿಮ್ಮ ಸಂತಾನ ರಣಕ್ಕೆ ಮಿನಿ ಉದಿಯಾದಾ ಹೇಂಗೆ? ಇರ್‍ಲಿ ಅದ್ ! ಯಾರಾರ್ ಅಪೂರ್ಪದ ನಂಟ್ರ್‍ಗ ಮಿನಿ ಬಂದರೆ" ಅಂತ ಅಯ್ಯೆ ಸೀತಮ್ಮ ಹೆದ್‌ರ್ಸಿತ್. ಅಪ್ಪ ಎಲ್ಯಣ್ಣ ನೆಗಾಡಿಕಂಡ್ ಬೀಡಿ ಎಳ್ಕಂಡ್ ಚೋಡಿ ಕರೆಗೆ ಹೋತ್.

ಆ ಸುಟ್ಟ್ ಹೋದ ಅಪೂರ್ಪದ ನಂಟ್ರ್‍ಗ ಯಾಗ ಬಂದವೆನಾ....? ಈ ಹೂಂಜಂಗಳ ಒಮ್ಮೆ ಕುದ್ಕ ಹೊತ್ತಿದರೆ ಅಯ್ಯೆಗೆ ಬುದ್ಧಿ ಬಾತಿತ್ತ್‌ಂತ ಮನ್ಸ್‌ಲೇ ನೆನ್ಸಿಕಂಡ್ ಗೋಪಾಲ ಹೈದ ನಂಗೆ ನಾಳೆ ಪೊರಿಕ್ಷೆ ಉಟ್ಟುಂತ ಹೇಳಿ ಚಾಲಿ ಮಾಡಿಕಂಡ್ ಹಿಂದಿ ಪದ್ಯ ಹಾಕಂಡ್ ಕುದ್ದತ್.

ಆರಕ್ಕೆ ಹತ್ತದ ಮೂರಕ್ಕೆ ಇಳಿಯದ ಈ ಕುಟುಂಬದ ಯಜಮಾನ ಎಲ್ಯಣ್ಣ. ಪ್ರಾಯ ಸುಮಾರ್ ಐವತ್ತ್. ಎಪಿಲ್ ಕಾರ್ಡ್. ಮನೆಲಿ ಗ್ಯಾಸ್ ಅಂಡೆ ಉಟ್ಟುಂತ ಹೇಳಿ ಸೊಸೈಟಿಲಿ ಸೀಮೆಣ್ಣೆ ಕೊಡ್ತುಲೆ. ಹೆಣ್ಣ್ ಸೀತಮ್ಮ ನಲ್ವತ್ಮೂರು. ಶ್ರೀಸಕ್ತಿ, ಅದ್, ಇದ್ ಸಂಘಂತೇಳಿ ಸೀರೆ ಸೆರ್‌ಂಗ್ ಬಿಗ್ದ್ ಕಟ್ಟಿ ಮಾತಾಡ್ವೆ, ಮೂರು ಮಕ್ಕ. ಸುರೂನವ ಐಟೈಐ-ಗ್ರೈಟೈಐ ಮಾಡಿಕಂಡ್ ಬೆಂಗ್ಳೂರ್‍ಲಿ ಉಟ್ಟು. ಕುಟುಂಬಲಿ ದೆವ್ವದ ಕೋಲ ಮೊದ್ವೆ-ಗಿದ್ವೆ ಇದ್ದರೆ ಬೆಂಗ್ಳೂರು ಸ್ಟೈಲ್‌ಲಿ ಬಂದ್ ಹೋದೆ. ಎರಡ್ನೆಂವ ಮಾಸತೇಳ್ರೆ ಜೀವ ಬುಡುವ ಗೋಪಾಲ. ಹಾಜಿರ್ ಪುಸ್ತಕಲಿ ಗೋಪಾಲಕೃಷ್ಣ. ಪೈನಲ್ ಇಯರ್ ಡಿಗ್ರಿ ಸುಳ್ಯಲಿ. ಒಂದಾರ್ ಹೆಣ್ಣ್ ಕೂಸು ಬೇಕೂಂತೇಳಿ ಇದ್ದ ದೆವ್ವ-ದೇವ್ರ್‍ಗೆ ಕೈಮುಗ್ದ್ ಹರ್ಕೆ ಹೇಳಿ; ಉರ್ಡಿ-ಉರ್ಡಿ ಅಕೇರಿಗೆ ಹುಟ್ಟಿದ್ ಗಂಡ್ ಹೈದ. ಅಂವ ಈಗ ಪೀವುಸಿ. ಇನ್ನೊಂದು ಪ್ರಾಯದ ಉಗ್ಗವ್ವ ಎಲ್ಯಣ್ಣನ ಅವ್ವ...... ಎಂಬತ್ತೈದ್ ತೊಂಬತ್ತರ ಹಕ್ಕಕ್ಕಲೆ ಆಗುಟ್ಟು. ಹೋದವರೊಟ್ಟಿಗೆ ಬಂದವರೊಟ್ಟಿಗೆ; "ನನ್ನ ಕಣ್ಣೆದ್‌ರ ಹುಟ್ಟಿದವು ಎಲ್ಲಾ ಹೋದ್ರೋ ಮಂಜ. ನಾ ಇನ್ನೂ ನಿಮ್ಮ ಕಣ್ಣ್ ಮುಂದೆನೇ ಒಳೇಂತ" ಎಲಾಡ್ಕೆ ಚಪ್ಪಿಕಂಡ್ ಅಕೇರಿನ ದಿನಗಳ ಲೆಕ್ಕ ಹಾಕುವೆ.

ಇಂಥ ಒಂದು ಲ್ಯಾಕನ ಕುಟುಂಬಲಿ ಕತ್ತಲೆ-ಕತ್ತಲೆ ಆಕನ ಬಾರೀ ಅಪೂರ್ಪಲಿ.... ಸೀತಮ್ಮ ಎರ್ಡ್ ದಿನ ಉಪಾಸ ಕುದ್ದ್, ಗಂಜಿ ನೀರ್ ಮುಟ್ಟದೆ ಹಾಕ್ಸಿಕಂಡ ವಿಲ್‌ಫೋನ್ ಕಿಣಿ ಕಿಣಿ ರಿಂಗಾತ್. ತುಬುಕ್ಕಂತ ಇತ್ತಂದ ಹಲೋ... ಅತ್ತಂದ ಹಲೋ... ಅಂತ ಮಾತಾಟ್‌ಕಂಡ್ ಸುಮಾರ್ ಐದ್ ಹತ್ತ್ ಮಿನಿಟ್ ಕಳ್ದ ಮೇಲೆ ಫೋನ್ ಇಸಿ "ಒಯ್ ನಾಳೆ ತವ್ರುಂದ ಅಣ್ಣನೂ ಅತ್ತಿಗೆನೂ ಕೂಸುನೂ ಬಂದವೆಗಡ. ನಾಳೆ ಬಂದರೆ ಒಂದು ಮೂರು ದಿನ ಒಳ್ದ್ ಹೋದು ಗಡ" ಅಂತ ಸೀತಮ್ಮ ತನ್ನ ತವ್ರುಮನೆಂದ ನಂಟ್ರ್ ಬಾವ ಸುದ್ದಿನ ಗಂಡಂಗೆ ಮಕ್ಕಳಿಗೆ ಎಲ್ಲಾ ಒಂದೇ ಉಸ್ರುಗೆ ಹೇಳಿ ಕುಸಿಪಟ್ಟತ್. ಹೆಣ್ಣ್‌ನ್ ಮಾತ್‌ನ ಕೇಳ್ದೇ ತಡ ಎಲ್ಯಣ್ಣ ತಲೆಗೆ ಕಟ್ಟಿದ ಕೆಂಪು ತೋರ್ತುನ ಬಿಚ್ಚಿ ಹೆಗ್ಲ್‌ಗೆ ಹಾಕಂಡ್ ಕೆಬಿಲಿದ್ದ ಬೀಡಿ ಹೊತ್ತ್‌ಸಿ ಬುಸು-ಬುಸು ಹೊಗೆ ಬುಟ್ಟ್ "ಅಯ್ಯೋ ರಾಮ ದೇವ್ರೇ ಹೆಂಗ್‌ಸ್‌ನ ತವ್ರುಮನೆವು ಕೊಡ್ಗಿನವು. ಅತ್ತನವ್ಕೆ ಸಣ್ಣ ಮೊರ್ಯಾದಿ ಮಿನಿ ಸಾಕಾದುಲೆ. ಗಮ್ಮೊತ್ತ್ ಎಲ್ಲ ಲ್ಯಾಕ ಮಾಡಿ ಕಳ್ಸೊಕು. ನಾವು ಘಟ್ಟಕ್ಕೆ ಹೋದರೆ ಅವು ಬಾರಿ ಗೌಜಿ ಗಮ್ಮೊತ್ತ್ ಎಲ್ಲ ಮಾಡ್ವೆ. ಈಗ ನಾವು ಅತ್ತ ತಲೆ ಹಾಕದೆ ಮೂರ್-ನಾಕ್ ವರ್ಷ ಆತ್. ಅದ್ ನಮ್ಮ ಮಿಸ್ಟಿಂಗ್. ಛೇ ಎಂಥರ ಮಾಡ್ದು? ಎರ್ಡ್ ಸಾವರ ಅಡ್ಕೆ ಲೆಕ್ಕ ಮಾಡೊಕೇ..... ಬೊಳ್ಪಾಕನ ರಿಸ್ಸsss.... ಮಾಡಿ ಸಾವ್‌ಕಾರನಕ್ಕಲೆ ಹೋಕೇ...." ಅಂತ ಮನ್ಸ್‌ಲೇ ನೆನ್ಸಿಕಂಡತ್.

"ಅಲ್ಲಯ್ಯಾ..... ಅವು ನಮ್ಮೊಲ್ಲಿಗೆ ಬಾರದೆ ಸುಮಾರ್ ವರ್ಷ ಆತ್. ಏನಾರ್ ಲ್ಯಾಕ ಗಮ್ಮೊತ್ತ್ ಮಾಡೊಕುಯಾ" ಅಂತ ಸೀತಮ್ಮ ಅತ್ತಂದಿತ್ತ-ಇತ್ತಂದತ್ತ ಕೊತ್ತಿನಾಂಗೆ ಹಾಂಟಿಕಂಡ್ ಹಾಂಟಿಕಂಡ್ ಹೋಗಿ ಸಾಮಾನ್ ಚೀಟ್ ಮಾಡಿಕಂಡೇ ಬಂದ್ ಗಂಡನ ನೈಸ್ ಮಾಡಿಕೆ ಸುರುಮಾಡ್ತ್. "ಹನೀಸ್ ಸುಮ್ಮನಿದ್ದಿಯಾ ಮಾರಾಯ್ತಿ. ಕೊಣಿದು ಹಂಞ ಕಮ್ಮಿಮಾಡ್, ಸುರೂಗೆ ಅವು ಇಲ್ಲಿಗೆ ಬರ್ಲಿ ಮತ್ತೆ ಗಮ್ಮೊತ್ತ್ ಮಾಡಮೊ" ಅಂತ ಎಲ್ಯಣ್ಣ ಹಿಂದಕೆ ಒಂದು ಬೀಡಿ ಹೋಸಿ ಕುರ್ಸುಂದ ಎದ್ದತ್.

ಅಷ್ಟೊತ್ತು ಸುಮ್ಮನೆ ಕುದ್ದ್‌ಕಂಡ್ ಇದ್ದ ಗೋಪಾಲ ಸೂರೋಡಿ ತುಂಬ ಕೋಣಿಯಕೆ ಸುರುಮಾಡ್ತ್. "ಅತ್ತೆ ಬಂದವೇ..... ಕೋಳಿ ಕೊಂದವೇ....." ಅಂತ ಅವಂಗೆ ನಂಟ್ರ್ ಬಾದರ್ಂದ ಜಾಸ್ತಿ ಈಗಾರ್ ಹೂಂಜನ ಕೊಂದವೇಂತ ಖುಷಿ. ನಂಟ್ರ ಹೆಸ್ರ್ ಹೇಳಿ ನಾವು ಹೊಟ್ಟೆ ತುಂಬ ಉಣಕ್ಕಂತ. ಹೈದನ ಎರ್ಡ್ ದಿನದ ರಜೆ ವಾಪಾಸ್ ಮೂರು ದಿನದ ಮೊಟ್ಟಿಗೆ ಮುಂದೆ ಹೋತು.

ಮಾರ್ನೆ ದಿನ ಚುಮು-ಚುಮು ಬೊಳ್ಪಾಕನನೇ... ಬಾಂವ ನಂಟ್ರ್‌ಗೆ ಗಮ್ಮೊತ್ತು ಮಾಡೊಕೂಂತ ಎರ್ಡ್ ಸಾವ್ರ ಅಡ್ಕೆನ ಲೆಕ್ಕ ಮಾಡಿ, ಹೆಂಗ್‌ಸ್ ಕೊಟ್ಟ ಅಕ್ಕಿ ಸಾಮಾನ್ ಚೀಟ್‌ನ ತಕಂಡ್ ರಿಸ್ಸsss... ಬಾಕೇಳಿ ಉಟ್ಟ ತೋರ್ತುನ ಬಿಚ್ಚಿ ಇಟ್ಟ್, ಸುರಾಲ್ ಕೋಸಿ, ಎಕ್ಕ್‌ಡ ಮೆಟ್ಟಿಕಂಡ್

ಎಲ್ಯಣ್ಣ ಸುಳ್ಯಕ್ಕೆ ಹೋಗಿ "ಸಾವ್‌ಕಾರ್ರೇ... ಸಂಗತಿ ಹೀಂಗೀಂಗೆ.... ಬಾರದೆ ಸುಮಾರ್ ವರ್ಷ ಆದ ಕೊಡ್ಗಿನ ನಂಟ್ರ್‌ಗ ಮನೆಗೆ ಬಂದವೆ. ನಂಗೆ ಅಡ್ಕೆಗೆ ಎಷ್ಟಾದೆ ಅಷ್ಟ್ ದುಡ್ಡುನೂ... ಅಕ್ಕಿ ಸಾಮಾನುನೂ, ಚಿಲ್ಲರೆ ಸಾಲ ಮಿನಿ ಒಳ್ದರೆ ಹಬ್ಬಕಾಕನ ಸುರೂನ ಕ್ಯೊಲ್ ಕೊಯ್ದಾಂಗೆ ತೀರ್ಸಿನೆ" ತೇಳಿ ಹೆಣ್ಣ್ ಬರ್ದ್ ಕೊಟ್ಟ ಸಾಮಾನ್ ಚೀಟಿಲಿದ್ದದರ ತಕಂಡ್, ಮೀಯೆಕೆ ಒಂದು ಗಮಾನದ ಸಾಬನ್, ಎರ್ಡ್ ಹೊಸ ತೋರ್ತು, ಒಂದು ಕಂಬಾಯಿ, ಹೆಂಗ್‌ಸ್‌ಗೆ ಒಂದು ನೈಟಿ ತಕಂಡ್, ಲೆಕ್ಕಕ್ಕೆ ಬರ್ಸಿ ಅಡ್ಕೆ ದುಡ್ಡು ತಕಂಡ್ ಅದಿಯೇ ರಿಸ್ಸಾಲಿ ಮೇಲೆ ಪೇಟೆಗೆ ಹೋಗಿ ಮದ್ಯಾಹ್ನದ ಗೈಪಿಗೆ ಒಂದು ಹೊರೆ ಹಸಿಮೀನ್ ತಕಂಡ್ ಬಸ್‌ಸ್ಟ್ಯಾಂಡ್ ಹಕ್ಕಲೆ ಬಾಕನ ನಂಟ್ರ್‌ಗ ರೆಡಿ. ಭಾವ, ನಾದ್‌ನಿ, ಒಡ್ಕದ ಕೂಸುನೊಟ್ಟಿಗೆ ಮತ್ತೊಂದು ಚೂಡಿದಾರದ ಗೂಡೆನೂ ಉಟ್ಟು. ಹಾಂಗೆ ಕುಸಿ-ಕುಸಿಲಿ ಮಾತಾಡಿಕಂಡ್ ಅಲ್ಲೇ ಹಕ್ಕಲಿದ್ದ ಅಂಗ್‌ಡಿಲಿ ಒಂದೊಂದು ನಿಂಬುಳಿ ಶರ್ಬೊತ್ತು ಕುಡ್ಕಂಡ್; ನಂತ್ರ ಹಿಂದೆನ ಸೀಟ್‌ಲಿ ಕುದ್ದ್‌ರ್ಸಿ, "ಅಣ್ಣ ನಿಮ್ಮ ಸೀಟ್‌ಲಿ ಹನೀಸ್ ಒಂದು ಕುಂಡೆ ಊರುವಟ್ಟ್ ಜಾಗೆ ಕೊಡಿ ಎಜೆಸ್ಟ್ ಮಾಡಿಕಣಿ" ತೇಳಿ ಎಲ್ಯಣ್ಣ ಡೈವರ್‌ನಕ್ಕಲೆ ಕೋಸಿಕಂಡತ್.

ಅಂದ್ ಎಲ್ಯಣ್ಣನ ಮನೆಲಿ ಹಬ್ಬದ ಗೌಜಿ. ನಂಟ್ರ್‌ಗ ಬಂದ ಹುರ್ಪು ಮನೆ ಮೊನ್ವರೆಲ್ಲಾ ಮೈಲ್‌ತುತ್ತ್ ಫಾಟ್‌ಗೆ ಓಡುವ ಮೀನ್‌ಗಳಾಂಗೆ ಜೀವ ಬುಟ್ಟ್ ಓಡಾಡ್ತಿದ್ದೊ. ಸೊಪ್ಪು, ಹುಲ್ಲು, ಗಂಜಿ-ಗೈಪು ಎಲ್ಲಾ ರಪ್ಪ-ರಪ್ಪ ಆತ್. ಅತ್ತೆ-ಮಾವನೊಟ್ಟಿಗೆ ಬಂದ ಈ ಪೊರ್ಲುನ ಚೂಡಿದಾರದ ಕುಸುಮ ಗೂಡೆನ ಹೇಂಗೆ ಮಾತಾಡ್ಸುವ ದಾರಿ ಅಂತ ಗೋಪಾಲ ಮೇಲೆ ಕೆಳಗೆ ನೋಡಿಕಂಡ್ ಎಂತರ ಮಾಡ್ದೂಂತ ಹಲ್ಲ್ ಚೆರ್ಕಂಡ್ ಕೂಸುನ ಆಡ್ಸಿಕಂಡ್ ಕುದ್ದತ್. ಪಾಪದ ಹೈದ ಅಂವ. ಕಾಲೇಜಿಗೆ ಹೋದರೂ ಒಂಥರಾ ಹಳ್ಳಿ ಹೈದನೇ. ಲವ್ವು-ಗಿವ್ವು ಪಲಾವೂಂತ ಗೂಡೆಗಳ ಇಸಯಲಿ ಎಲ್ಲ ಅಂವ ಮಾರ್ ದೂರ. ಅಂವನ ಮೊಬೈಲ್‌ಲಿ ಲೈಟ್ ಹಾಕಿ ಹುಡ್ಕಿರೂ ಸನ ಒಂದು ಗೂಡೆನ ನಂಬರ್ರೂ ಸಿಕ್ಕಿಕಿಲೆ. ಇಂಥ ಹೈದಂಗೆ ಕೊಡ್ಗಿನ ಗೂಡೆನ ನೋಡಿ ಯಾಕೋ ಅದರ ಮಾತಾಡ್ಸೊಕೂಂತ ಮನ್ಸಾತ್. ಆದರೂ ಹೆದ್ರಿಕೆ. "ಎಲ್ಯಾರ್ ಮಾತಾಡದಿದ್ದರೆ...? ಇಲ್ಲೆ ಮನೆವು ಏನಾರ್ ತೊಪ್ಪು ತಿಳ್ಕಂಡರೆ...? ಯಾಕೋ ನಾಚಿಕೆನೂ ಆತಾ ಉಟ್ಟು. ಛೇ ಹೇಂಗೆ ಮಾತಾಡ್ಸುದು ಏನಾರ್ ಕೆಣಿ ಮಾಡೊಕಲ್ಲಾ...? ಅಂತ ನೆನ್ಸಿಕಂಡ್ ಕುದ್ದತ್. ಅವಂಗೂ ನಂಟ್ರ್‌ಗಳಿಗೂ ಮಾರ್ ದೂರ. ಆದರೆ ಈ ಸರ್ತಿ ಯಾಕೋ ಅತ್ತೆ, ಮಾವ, ಕೂಸೂಂತ ಹಕ್ಕಲೇ ಕುದ್ದ್‌ಕಂಡತ್. ಕೂಸುನೊಟ್ಟಿಗೆ ಆಟಾಡಿಕ್ಕಂಡ್, ಗೂಡೆನ ಕದ್ದ್ ಕದ್ದ್ ನೋಡಿಕಂಡ್ ಮಾತಾಡ್ಸಿಕೆ ಆದೆನಾಂತ ನೋಡ್ತಿತ್ತ್.

ಅಂತೂ ಮದ್ಯಾಹ್ನ ಮೀನ್‌ಗೈಪುಲಿ ಎಲ್ಲೊವು ಗಮ್ಮೊತ್ತು ಉಂಡ್, ಹೀಂಗೇ

ಕಷ್ಟ ಸುಕ ಮಾತಾಟ್‌ಕಂಡ್, ಹಿಂಬೊತ್ತ್ ಆಕನ ಒಂದೂ....ಅವ್ಲಕ್ಕಿ, ಮರಗೆಳ್ಸ್, ಕಣ್ಣ ಚಾಯನೂ ಆಗಿ; ಕಣ್ಣ್ ಬೊಳ್ಪು ಇದ್ದಾಂಗೆ, ಕತ್ತಲೆನ ಗಮ್ಮೊತ್ತ್‌ಗೆ ಹೂಂಜನ ಕೊಲ್ಲುದೂಂತ ತೀರ್ಮಾನ ಆತ್. ಹೂಂಜನ ಕೊಲ್ಲುದೂಂತ ತೀರ್ಮಾನ ಆದೇ ತಡ; ಗೋಪಾಲ ನಾಯಿಗಳ ಕರ್ಕಂಡ್, ಬುಲ್ಲೆಹುಕ್ಕ್ ಬೆರ್ಸಿ ಹಿಡ್ಡ್ ನಾಳಿ ತಿಂರ್ಬಿನೂ ಆತ್. ಮೂರು-ಮೂರ್ವರೆ ಕೆ.ಜಿ. ಆವ ಹೂಂಜ. ತೊಪ್ಪುಳು ತೆಗ್ದ್ ಹಜಿರ್ ಮಾಡಿ ತೆರ್ದ್ ಮುರ್ದಾಕನ ಅಳೆಗೆಗೆ ಬಾವಡೆ ಇಸಿಕಾದುಲೆ. ಸಿಲ್ವೆ ಕೊಳ್ಳಿನ ಕೆಂಡಲಿ ಬೆಂದ ಕೋಳಿಗೈಪುನೂ, ಕಲ್ಲ್‌ಕಾವುಲಿನೊಟ್ಟಿಗೆ, ಕೊಡ್ಗಿನ ನಂಟ್ರ್‌ಗಳಿಗೆಂತನೇ ಮಾಡಿಸಿದ ಎರ್ಡ್ ಮೂರ್ ವರ್ಸ ಹಳೇ ಹೊಗೆಹಿಡ್ದ ಬೀಜಣ್ಣ್ ಸರಾಯದ ಕುಪ್ಪಿನೂ ಅಟ್ಟಂದ ಇಳ್ದ್ ಬಾತ್. ನಂಟ್ರ್‌ಗಳೂ, ಮನೆವೂ ಎಲ್ಲೊವು ಸೇರಿ ಗಮ್ಮೊತ್ತ್ ಉಂಡರೂ ಗೋಪಾಲಂಗೆ ನೆಮ್ಮೊದಿ ಇಲ್ಲೆ. ಗೂಡೆನ ಮಾತಾಡ್ಸುವ ಬಗೆ ಹೇಂಗೆ ತೇಳುವ ಕೊಡಿ ಆಸೆ ಎದೆ ಸರೆಲಿ ಹಾಂಗೆ ಇತ್ತ್. "ಇರ್ಲಿ ನಾಳೆ ಏನಾರ್ ಆಗಲಿ, ಅದ್ ನಮ್ಮ ಮನೆಗೆ ಬಂದದ್ ನಾನೇ ಮಾತಾಡ್ಸಿನೆಂತೇಳಿ" ಓದಿಕೆ ಮನ್ಸಾಗದೆ ಪುಸ್ತಕನ ಕರೆಗೆ ನೂಕಿಸಿ ಗುಡಿ ಹೊದ್ದ್ ಸುಂರ್ಬಿ ಮೊಲ್ಗಿತ್.

ಹೆಚ್ಚಿಕಮ್ಮಿ ನಡಿರ್ಲ್ ಗಂಟೆ ಎರ್ಡಾಗಿರ್ದು! ಪಾಪ ಕುಸುಮ ಗೂಡೆ ಹೊಟ್ಟೆಬೇನೆಂತ ಕಿರ್ಚಿ ಮರ್ಡ್‌ತಾ ಉಟ್ಟು. ಎಲ್ಲೊವು ಎದ್ದ್‌ಕುದ್ದ್ ದೀಪ ಹೋಸಿ ಹೊಣ್ಕೆಂಡ್ ನರ್ಕುವ ಗೂಡೆನ ಎಂತರ ಮಾಡ್ದೋಂತ ಪೇಚಾಡ್ತಿದ್ದೊ. ಗೂಡೆಗೆ ಮದ್ಯಾಹ್ನದ ಮೀನ್, ಅವ್ಲಕ್ಕಿ, ಮರಗೆಳ್ಸ್, ತಿಂಡಿ, ಊರ್ ಕೋಳಿ ಗೈಪು, ಬೊಡ್ಡಿಟ್ಟ್, ಎಲ್ಲಾ ಸೇರಿ ಅರ್ಗಣೆ ಆಗದೆ ಉಷ್ಣ ಹತ್ತಿ ಹೊಟ್ಟೆಬೇನೆ ಸುರಾಗಿತ್ತ್. ಉಗ್ಗವ್ವ ಹೇಳ್ದೋ.. "ಈ ಉಷ್ಣದ ಹೊಟ್ಟೆ ಬ್ಯಾನೆಗೆ ಕೆಂದಾಳೆ ಬೆಂಡಕೆ ನಾಕ್ ಜೀರ್ದಕ್ಕಿ ಹಾಕಿ ಕುಡ್ದರೆ ಟಮ್ಮ.... ಕಮ್ಮಿ ಆದೇಂತೇಳ್ದೊ" ಅದ್ ಹೌದು ಕೂಡಾ... ಕೆಂದಾಳೆ ಬೆಂಡದ ನೀರ್ ಒಂಥರಾ ಅಮೃತ ಇದ್ದಾಂಗೆ. ಆ ಚಾಳೆ ಬೇರ್‌ಂದ ಹಿಡ್ದ್ ಕುಬೆ ಕೊಡಿಗೆ ಮುಟ್ಟ ಅದರ್ಲಿ ಮೊದ್ದೇ ಒಳದ್. ಆದರೆ ಕೆಂದಾಳೆ ಬೆಂಡ ಈ ನಡಿರ್ಲ್ ಎಲ್ಲಿಂದ ತಾದು? ಅದೂ ಅಲ್ಲದೆ ಆ ಚಾಳೆ ಒಳದೇ ಆಚೆಕರೆ ಕಾಗಡೆವ್ರ ಮನೆಲಿ. ಅವ್ಕೂ ನಾವ್ಗೂ ಸೂತ್‌ಗ ಹೋಗಟ-ಬರಟ ಇಲ್ಲದೆ ವರ್ಷ ಎರ್ಡಾಗುಟ್ಟು. ನಮ್ಮ ಕಟ್ಟಿ ಹಾಕಿದ ಹಸ್ ಒಂದ್ ಬೊಳ್ಳಿ ಪೀಂಕ್‌ಸಿ ಬೇಲಿ ಕಡ್ಪ ಹಾರಿ ಅವರ ಒಡ್ಜಿಲ್‌ಗೆ ಹೋಗಿ ರಬ್ಬರ್ ದೈಗೆ ಬಾಯಿ ಹಾಕಿದೇ ತಡ; ಅತ್ತಂತ ಬೀಸಿ ಬಂದ ಕಡ್ತೊತ್ತಿ ಹಸ್‌ನ ಬೀಲನ ಅರ್ದ ತುಂಡ್‌ಮಾಡಿತ್ತ್. ಎರ್ಡ್ ಕಡೆವ್ಕೂ ಹೀನ ಮಾನ ರಣ ಕಾಳಗನೇ ನಡ್ದ್ ಹೋಗಿ ದೆವ್ವದ ಹೆಸ್ರ್‌ಲಿ ಹರ್ಕೆ ಹಾಡ್ ಹೇಳಿಕಂಡ್, ಅಕೇರಿ ಆಗಿ ಹೋಗಟ ಬರಟ ನಿತ್ತ್ ಹೋಗಿತ್ತ್. ಎದ್ರ್ ಸಿಟ್ಟ್ ತೇಳ್ದೇ ಹಾಂಗೆ. ಸಿಟ್ಟ್ ಬಾಕನ ಏನ್ ಮಾಡಿಹೋದೇಂತ ಹೇಳಿಕಾದುಲೆ. ಸಿಟ್ಟ್ ಚೆಣ್ದ ಮೇಲೆ ಬಾರೀ ಬೇಜರ ಆದೆ. "ಅಯ್ಯನ ಬಂಡೇ ಹೀಂಗೆ

ಆದು ಬೇಡಾಯ್ತ್ಂತ." ಆದರೇನ್ ಮಾಡ್ದು? ಎರ್ಡ್ ಮನೆವ್ಕೂ ಮತ್ತೆ ಒಗ್ಗಾಟ್ಟಾಕೆ ಸ್ವಾಭಿಮಾನ ಅಡ್ಡ ಬಂದದೆ. ಆದರೆ ಈಗ ಕಾಲ ಕೂಡಿ ಬಂದುಟ್ಟು. ಈ ಗೂಡೆನ ಹೊಟ್ಟೆಬೇನೆಗೋಸ್ಕರನಾರ್ ನಾವು ಕಾಗಡೆ ಮನೆಗೆ ಹೋಗಿ ದಮ್ಮಯ್ಯ-ದಕ್ಕಯ ಹಾಕಿ ಕೆಂದಾಳೆ ಬೆಂಡ ತಕಂಡ್ ಬರೋಕೆ. ಇಲ್ಲರೆ ಈ ಗೂಡೆನ ಈ ನಡಿರ್ಲ್ ಆಸ್ಪತ್ರೆಗೆ ಹೊರೊಕುಂತ ಹೇಳಿ ಮನ್ಸ್‌ಲೇ ನೆನ್ಸಿಕಂಡ್ ಕಣ್‌ನೀರ್ ಪೂಜಿಕಂಡ್ ಯಜಮಾಂತಿ ಸೀತವ್ವ "ಓಯ್ ದಮ್ಮಯ... ನಡಿರ್ಲ್ ಆದರೂ ತೊಂದರೆ ಇಲ್ಲೆ ಅವರ ಮನೆಗೆ ಹೋಗಿ ಅವರೊಟ್ಟಿಗೆ ಕೇಳಿ ಒಂದ್ ಕೆಂದಾಳೆ ಬೆಂಡ ತಕಂಡ್ ಬನ್ನೀಂತೇಳಿ" ಮರ್ಬ್ಬ ಕಂಡ್ ಕೈಮುಗ್ತ್.

"ನನ್ನಂದ ಅವನ ಕಾಲಡಿಗೆ ಹೋಗಿ ದಮ್ಮಯ ಹಾಕಿಕೆ ಆಕಿಲೆ. ಈಗ ಜೀರ್ದಕ್ಕಿ ಓಡ್ ಕಸಾಯ ಏನಾರ್ ಮಾಡಿ ಕುಡ್ಸು. ಬೇಕರೆ ಈಗಳೇ ರಿಸ್ಸ.. ಬಾಕೇಳಿ ಆಸ್ಪತ್ರೆಗೆ ಪೋಯಿ. ಇಲ್ಲರೆ ಒಂದು ಕೆಲ್ಸ ಮಾಡನೊ. ಕೇಳ್ದು ಹಿಡಿದು ಒಂದೂ ಬ್ಯಾಡ. ಎರ್ಡ್ ಬೆಂಡನ ಹುಡ್ಕಿ ಕದ್ದ್‌ಕಂಡ್ ಬರನೊ ಮೊದ್ದಿಗೆ ತಾನೆ?" ಅಂತ ಹೇಳಿ ಗೌಡ್ರು ಬೀಡಿ ಹೋಸಿ ಚುರ್ಕರ ಕುದ್ದೊ.

ಅಟ್ಟೊತ್ತು ಗೂಡೆನ ಹೊಟ್ಟೆ ಬೇನೆನ ನರ್ಕಟ, ಮನೆವರ ಮಾತ್ ಕೇಳಿಕಂಡ್ ಗುಡಿಹೊದ್ದ್ ಮಲ್ಗಿದ ಗೋಪಾಲ ಹೈದ ಒಲ್ಲಿಕೊಡ್ಕಿ ಎದ್ದ್ ಕುದ್ದತ್. "ನೀ ಹೆದ್ರ್‌ಬಡ ಅವ್ವಾ.. ಅಪ್ಪ ಹೋಗದಿದ್ದರೆ ಏನ್ ನಾನೇ ಹೋಗಿ ಕೇಳಿಕಂಡ್ ಬನ್ನೆ. ಕಷ್ಟಕ್ಕೆ ಆಗದ ಮೊನ್ಷರ್-ಮೊಯಿಂಸರೇ ಅಲ್ಲ...! ಏನೋ ನಮ್ಮೊಳಗೆ ಲಡಾಯಿ ನಡ್ದೋತ್. ಅದರ್ನೇ ಮನ್ಸ್‌ಲಿಸಿಕಂಡ್ರೆ ಹೇಂಗೆ?" ತೇಳಿ ಮೂರು ಸೆಲ್ಲ್ ಲೈಟ್ ತಕಂಡ್ ಅಂಗಿ ಕೋಸಿ, ಸಂಗತ್ತಕ್ಕೆ ಬೊಳ್ಳು ನಾಯಿನ ಕರ್ಕಂಡ್ ಹೋಗಿ ಕಾಗಡೆ ಮನೆ ಬಾಗ್ಲ್ ಬೊಡ್ತ್.

"ಚಿಕ್ಕಪ್ಪಾ.... ಓ.. ಚಿಕ್ಕಪ್ಪಾ...." ಅಂತ ಕರಿವ ಸೊರ ಕೇಳಿ ಹದ್ಕಿ ಎದ್ದ ಕಾಗಡೆ ಮನೆವು ಬಾಗ್ಲ್ ತೆಗ್ದ್ ಹೊರೆಗೆ ಬಂದೊ. "ಯೆಂತಣ್ಣಯ್ಯಾ... ಇಷ್ಟೊತ್ತಿಗೆ ಬಂದಳ. ಏನ್ ವಿಸೇಸ ಮೋರೆಲಿ ಯಾಕೆ ಬೇಜರ... ಏನಾತ್ ಹೇಳ್" ಅಂತ ಒಂದೇ ಉಸ್ರುಲಿ ಕೇಳ್ದೊ. ಯಾಕೋ ಅವರ ಮನ್ಸ್‌ಲಿ ಹಳೇ ಸಿಟ್ಟ್ ಹಾಂಕಾರದ ಮಾತ್‌ಗ ಒಂದೂ ಕಂಡ್‌ಬಾತ್ಲೆ. ಎಂಥ ಹಗೆಕಾರ ಆದರೂ ಮನೆ ಬಾಗ್ಲ್‌ಗೆ ಬಂದವರ ಲ್ಯಾಕ್‌ಲಿ ಮಾತಾಡ್ಸುದು ಹಳ್ಳಿ ಹಿರಿಕರ ಪದ್ದತಿ. ಕೆಲೊವು ಮಾತ್ರ ತಲೆ ಸರಿ ಇಲ್ಲದವು ಕತ್ತಿ ತೆಗ್ದವೆ. ಗೋಪಾಲ ಹೈದ ನಡ್ದ ಸಂಗತಿನ ಎಲ್ಲಾ ಒಂದೇ ಡಮ್ಮುಲಿ ಸೇಂಕೆಂಡ್ ಹೇಳ್ತ್. "ನಿಮ್ಮಂದ ಒಂದು ಉಪಕಾರ ಆಕು. ನಮ್ಮ ಹಳೇ ಸೇಡ್ ಸಿಟ್ಟ್‌ನ ಮನ್ಸ್‌ಲಿಸಿಕಣದೆ ನಂಗೆ ಎರ್ಡ್ ಕೆಂದಾಳೆ ಬೆಂಡ ಕೊಡೊಕು. ಅಪ್ಪನೂ ಅವ್ವನೇ ನನ್ನ ಕಳ್ಸಿದ್. ನಮ್ಮೊಲ್ಲಿ ದೆವ್ವದ ಹೆಸ್ರ್‌ಲಿ ಹರ್ಕೆ ಹಾಡ್ ಒಳದ್ ಸತ್ಯ. ಯಾದೋ ಹಾಳ್ ಗಳ್ಗೆಲಿ ಸೂಜಿಲಿ ತೆಗಿದರ, ಕೊಡ್ಲಿ ತಕಂಡ್ರೂ ಕೂಡಾ

ತೆಗೆಕೆ ಬೊತ್ತದ ಸ್ಥಿತಿಗೆ ತಂದಿಸ್ಯಳೊ. ತಪ್ಪು ಎರ್ಡ್ ಕಡೆಂದಳೂ ನಡ್ದುಟ್ಟು. ಈಗ ನಮ್ಮ ನಂಟ್ರಗೂಡೆನ ಜೀವ ನೀವು ಕೊಡುವ ಕೆಂದಾಳೆ ಬೆಂಡಲ್ಯುಟ್ಟು. ದಮ್ಮಯ್ಯಾ.. ನಂಗೆ ಎರ್ಡ್ ಬೆಂಡ ಕೊಡೊಕು. ಇಲ್ಲೆಂತ ಮಾತ್ರ ಹೇಳ್ಬಡಿ. ನಿಮ್ಮ ಕಾಲ್ ಬೇಕರೆ ಹಿಡ್ಕಣೆ. ನಿಮ್ಮ ಈ ಋಣನ ನಾ ಯಾಗೋಳು ಮರೆಕಿಲೆ."

"ಏ.... ಇಲ್ಲೆಣ್ಣಯ್ಯಾ... ನಾ ಬೆಂಡ ಕೊಟ್ಟನೆ ನಿಂಗೆ. ಆದರೆ ಆ ಬೆಂಡನ ಆ ಗೂಡೆ ಕುಡಿಯಕೆ ಮುಂದೆ ನಾವ್ಗೂ.. ನೀವ್ಗೂ.. ಹರ್ಕೆ ಹಾಡ್ ಉಟ್ಟು. ಅದ್ಕೆ ದೆವ್ವಕ್ಕೆ ಒಂದು ಈಡ್ ತೆಗ್ದ್ ಇಸಿ ತೊಪ್ಪಾತ್‌ಂತ ಬೇಡಿಕಂಡ ಮೇಲೆ ಅದ್ ಕುಡಿಯೊಕು. ನಡೀರ್ಲ್ ಆದರೂ ದೊಡ್ಡ ಸಂಗತಿ ಅಲ್ಲ... ನಡಿ ಪೋಯಿ ನಾನೂ ಬನ್ನೆ" ಅಂತ ಹೇಳ್ದ ಕಾಗಡೆ ಮನೆ ಚಿಕ್ಕಪ್ಪನೊಟ್ಟಿಗೆ ಗೋಪಾಲ ಹೈದ ಬೆಂಡ ತಕಂಡ್ ಬಂದ್ ತೊಪ್ಪು ಕಾಣಿಕೆ ತೆಗ್ದ್ ಇಸಿ, ಎರ್ಡ್ಡೂ ಮನೆವರ ಒಂದು ಮಾಡ್ಸಿ; ಬೆಂಡದ ನೀರ್‌ಗೆ ಜೀರ್ದಕ್ಕಿ ಹಾಕಿ ಕಸಾಯ ಮಾಡಿ ಗೂಡೆಗೆ ಕುಡಿಯಕೆ ಕೊಟ್ಟೊ. ಕಸಾಯ ಕುಡ್ದ ಅರ್ದ ಗಂಟೆಲಿ ಗೂಡೆನ ಹೊಟ್ಟೆಬೇನೆ ಕಮ್ಮಿ ಆಗಿ ಮೋರೆಲಿ ಹನೀಸ್ ಗೆಲುಕಂಡತ್.

ಅಷ್ಟೊತ್ತಿಗೆ ಕೋಳಿ ಕೂಂಗಿ ಚುಮು ಚುಮು ಬೆಳ್ಜರ್ ಬೊಳ್ಪಾಕಂಡ್ ಬಾತ್. ನಂಟ್ರ ಗೂಡೆನ ಹೆಸ್ರೇಳಿ ಕೆಂದಾಳೆ ಬೆಂಡದ ನೆವನಲಿ ಒಡ್ದ್‌ಹೋದ ಎರ್ಡ್ ಮನೆನ ಸಂಬಂಧ ಮತ್ತೆ ಸಾಬೀತಿಲಿ ಒಂದಾಗಿ ಮೂಡನ ಪೊರಿಲಿ ಹೊಸ ಬೊಳ್ಪು ಮೂಡಿತ್. ಹೆಂಗಾರ್ ಗೂಡೆನ ಮಾತಾಡ್ಸೊಕೂಂತ ಇದ್ದ ಗೋಪಾಲ ಹೈದನಕ್ಕಲೆ "... ನೀವಿಲ್ಲದಿದ್ದರೆ ಇಷ್ಟೊತ್ತಿಗೆ ನಾ ಸತ್ತೇ ಹೋತಿದ್ದೆ. ನನ್ನ ಜೀವ ಒಳ್ಸಿದ ಉಪಕಾರನ ನಾ ಯಾಗೋಳು ಮೆರೆಕಿಲೆ..." ತೇಳಿ ಒಂದು ಹೂ ನೆಗೆನ ಹೈದನಕ್ಕಲೆ ಹರ್ಕಿಟ್ಟ್ ಕಣ್ಣ್‌ಹೊಡ್ದ್ ನಾಚಿಕೆಲಿ ಕೂಸುನ ಕರ್ಕಂಡ್ ಕುಸುಮ ಗೂಡೆ ಜಾಲ್ ತಲೆಗೆ ಹೋತ್.

***

# ಚೋಮುಗ್ಗವ್ವ....

ಬೊದ್ಕುನ ಎಲ್ಲ ಮಜೆಲ್‌ಗಳ ದಾಟಿ, ಊರು ಹೋಗುಂತೇಳಿ, ಕಾಡ್ ಬಾಂತೇಳುವ, ಕಾಟಕೆ ಕಾಲ್ ನೀಂಡಿಸಿಕೆ ಆದವ್ಕೆ ಇನ್ನೂ ಬೊದ್ಕಿಕೆ ಆಸೆ ಆದೆ ಗಡ. ಮಕ್ಕಳ್ಗೆ ಮೊದ್ವೆ ಆಕು, ಅವ್ಕೆ ಕೂಸ್ ಹುಟ್ಟೊಕು. ಆ ಕೂಸ್ ಬೆಳ್ದ್ ಮೊದ್ವೆ ಆಗಿ ಅದ್ಕೊಂದ್ ಕೂಸ್ ಹುಟ್ಟಿ; ಆ ಕೂಸ್ಗೆ ನಾಕ್ ಅಕ್ಕಿ ಬಿತ್ತ್‌ನ ಹಾಕಿ ನಾ ನೆಮ್ಮೆದಿಲಿ ಕಣ್ಣ್ ಮುಚ್ಚಿನೆ ತೇಳುವ ಹಳೇ ಹಣ್ಣಾದ ತಲೆಗಳ ಜೀವಾದಿಗೆ ಸೇರ್ದ ಜಾತಿಲಿ ನಮ್ಮ ಚೋಮುಉಗ್ಗವ್ವನೂ ಒಂದ್.

ಚೋಮಜ್ಜಿ ಆ ಊರ್ನ ಎಲ್ಲವ್ರ ಪಿರೀತಿನ ಉಗ್ಗವ್ವ, ನಟ್ಟ್‌ನೆಡಿರ್ಲ್ ಹೋಗಿ ಅಜ್ಜಿನ ಮನೆ ಬಾಗ್ಲ್ ಬೊಡ್ಡ್, "ಹೊಟ್ಟೆಸಿದೆ ತಿಂಬಕೆ ಏನಾರ್ ಕೊಡಿ" ತೇಳ್ರೆ ಹಿಂದೆ ಮುಂದೆ ನೋಡದೆ ಇದ್ದದರ ತಂದ್ ಹಾಕೊವು. ಬೊಸ್ರಿಹೆಮ್ಮಕ್ಕಳ್ಗೆ ಬ್ಯಾನೆ ಗೊತ್ತಾಗದಾಂಗೆ ಹೆರ್ಗೆ ಮಾಡ್ಸಿದವು. ಹುಟ್ಟಿದ ಕೂಸ್ಗೆ ಹದ್ವುಗೆ ಮೊದ್ದ್‌ನೆಣ್ಣೆ, ತಲೆ ಬುಟ್ಟರೆ ಕರಿ ಬಳೆ ಚೂರ್ಲಿ ಸುಟ್ಟಿಸಿ ಚಿಟ್ಕೆ ಹಾಕೊವು. ಗಾಳಿ ಸೋಂಕುಗೆ ಪಿಸಿ ಪಿಸಿ ಮೊಂತ್ರ ಹಾಕಿ ಕುರ್ದಿ ನೀರ್ಲಿ ಕಳ್ದ್ ತೆಗೆವು. ಕೊದಿ ಮುಟ್ಟಿರೆ ಬೆಳ್ಳುಳಿ ಪಾಕ ಮಾಡಿ ತಿಂಬಕೆ ಕೊಡೊವು. ತಿಂದದ್ ಹೆಚ್ಚಾಗಿ ಕಟ್ಟ್ರ್ ಆದರೆ ಕಟ್ರ್ ಮುರ್ದ್ ನೆಟ್ಟೆ ತೆಗೆವು. ಊರ್ಗೆ ಬೇಕಾದ ಹಳ್ಳಿ ಮೊದ್ದ್‌ನ ಪೊಂಡಿತರ್ ನಮ್ಮ ಚೋಮುಗ್ಗವ್ವ ಪ್ರಾಯ ತೊಂಬತ್ತ್-ತೊಂಬತ್ತೈದ್ ಆದರೂ ಕಟ್ಟೆ ಹೋದ ಬೆದ್ರ್‌ನಂತಾ ಗಟ್ಟಿ ಸರ್ರ. ತನ್ನ ಏಳ್ ಮಕ್ಕಳ ಪ್ಯೊಕಿ ಒಡ್ಕದ ಮಂಜನ ಮಗ ಅಂತೇಳ್ರೆ ಪಿಳ್ಳಿನ ಕಂಡರೆ ಅಜ್ಜಿಗೆ ಭಾರೀ ಕುಷಿ. ಅಕೇರಿದ್ ತೊಳ್ದ್ ಹೊಯ್ದದ್ ತೇಳಿ ಏನೋ, ಬಾರೀ ಪೊಂತಟ, ಬಾರೀ ಕೊಂಡಾಟ!

ಚೋಮಜ್ಜಿದ್ ಒಂದೇ ಒಂದ್ ಅಕೇರಿ ಆಸೆ ಒಡ್ಕದ ಪಿಳ್ಳಿಗೆ ಮೊದುವೆ ಆಗಿ ಅದ್ ಒಂದ್ ಒಳ್ಳ ಮನೆಸ್ಥನ ಸೇರ್ದ ದಿನನೇ ನಾ ನೆಗ್ದ್ ಬಿದ್ದರೂ ನಾ ಸೀದಾ ಸೊರ್ಗಕ್ಕೇ ಹೋವೇಂತ...! ಅಜ್ಜಿ ಹಾಂಗೆ ಹೇಳಿಕ್ಕೂ ಒಂದ್ ಸಂಗತಿ ಉಟ್ಟು. ಆ ಹೆಣ್ಣ್‌ಕೂಸ್ ಹುಟ್ಟಿದ ಮೂರ್ ತಿಂಗಳ್ಲೇ ಇವ್ಕೆ ಹಿಡ್ಕಂಡ ದರಿದ್ರ ಸೆನಿ ದೂರಾತ್ ಗಡ. ಅಜ್ಜಿನ ಕೈನೀರ್ ಕುಡ್ಕಂಡೇ ಬೆಳ್ದ ಗೂಡೆ, ಸಾಲೆಂದ ಹಿಡ್ದ್ ಸಂತೆವರ್ಗೂ ಅಜ್ಜಿನೇ. ಬುತ್ತಿಕಟ್ಟುಂದರ್ದ ಹಿಡ್ದ್, ಜೋಡಿ ದಾಡ್ಸಿ, ಮನೆಗೆ ಕರ್ಕಂಡ್ ಬಂದ್ ಸೀರ್ತುಂಡ್‌ಲಿ ತಲೆಸೆಂಡಿ ತೆಗ್ದ್ ಬಿಸಿ ಚಾಯನೂ ಹೊರ್ದ ಹಪ್ಪಳನೂ ತಿನ್ಸಿ, ಎಲಾಡ್ಕೆ ಚೆಂಚಿಂದ ಚಿಲ್ಲರೆ ಪೈಸೆ ಕೂಡಾ ಅಜ್ಜಿನೇ ಕೊಡ್ತು. ಪಿಳ್ಳಿ ಗೂಡೆನೂ ಹಾಂಗೆ ಅಪ್ಪ ಅಟ್ಟದ ಪೊರಿಲಿ ಅಡ್ದ್‌ಂಗ್‌ಸಿ ಇಸಿದ್ದ ಗೇರ್ದಣ್ಣ್ ಸರಾಯನ ಕುಪ್ಪಿಂದ ಬೊಗ್ಗ್‌ಸಿ ಎರ್ಡೆರ್ಡ್ ಬೂಚು ಅಜ್ಜಿಗೆ ಕೊಡ್ತಿತ್. ಅಜ್ಜಿ ಅದರ ಕಣ್‌ಮುಚ್ಚಿ ಕುಡ್ದ್

ಬಾಯಿ ಚಪ್ಪಿಕಂಡ್, ಅಜ್ಜನ-ಅಜ್ಜಿನ ಪೊಂಡ್‌ನ ಕಥೆಗಳ ಹೇಳಿಕೆ ಕುದ್ದರೆ ಪಿಳ್ಳಿ ಕೆಬಿ ಕುತ್ತಮಾಡಿಕಂಡ್ ಕೇಳಿ ಅಲ್ಲೇ ಸುಂರ್ಬಿ ಗುಡಿ ಹೊದ್ದ್ ಗೂರೆಳೆತ್ತಿತ್ತ್.

ಇತ್ತ ಪಿಳ್ಳಿಗೆ ವರ್ಷ ಹದ್ನೆಂಟ್-ಇಪ್ಪತ್ತ್ ಆಕಂಡ್ ಬಾಕನ ಚೋಮಜ್ಜಿ; ಗೂಡೆಗೆ ಒಂದ್ ಒಳ್ಳ ಕಡೆ ಸಂಧಾನ ಇದ್ದರೆ ಹೇಳೀಂತ ಸಿಕ್ಕಿಸಿಕ್ಕಿದವರೊಟ್ಟಿಗೆ ಹೇಳ್ತಿತ್ತ್. ಆದರೆ ಒಂದು ಪೊತಿನೂ ಸರಿಗಟ್ಟಾಗಿ ಬಾತಿಲ್ಲೆ. ಅದ್ ಬೊಳಿ ಆತ್. ಹೈದ ಕುಡ್ದದೆ. ಗೂಡೆನ ದೆಸೆ ಸರಿ ಇಲ್ಲೆ. ಅದ್ ಕೂಡಿ ಬಾಲ್ಲೆ. ಇದ್ ಕೂಡಿ ಬಾಲ್ಲೆ ಅಂತ ಹೇಳಿ ಹೇಳಿ ತಿಂಗ ಆರಾಗಿ ವರ್ಷ ಕಳ್ದ್ ಹೋಗಿತ್ತ್. ಚೋಮಜ್ಜಿಗೆ ನಿದಾನಕ್ಕೆ ನರನಂರ್ಬುಗಲ್ಲಿ ತ್ರಾಣ ಇಲ್ಲದಾಂಗೆ ಆಗಿತ್ತ್. ಆದರೂ ಗಟ್ಟಿ ಜೀವ ಅವು ಹೇಳ್ತಿದ್ದೊ, "ಪಿಳ್ಳಿನ ತಲೆಗೆ ನಾಕ್ ಅಕ್ಕಿ ಬಿತ್ತ್‌ನ ಹರ್‌ಂಡದೆ ನಾ ಸಾಯೆಕಿಲೆ ಮಂಜ."

ಹಾಂಗೂ ಹೀಂಗೂ ದಿನಂಗ ಹೋತಾ ಇತ್ತ್. ಯಾದೋ ಒಂದ್ ದೂರದ ಸಂಬಂದ ಘಟ್ಟದ ಕಡೆಂದ ಗೂಡೆನ ನೋಡಿಕೆ ಬಂದ್ ಸಂದಾನ ಕೂಡಿ ಜಂಬರ ಎದ್ದತ್. ಅಜ್ಜಿಗೆ ಸೊರ್ಗಕ್ಕೆ ಮೂರೇ ಗೇಣ್. ಹೈದಂಗೆ ಬ್ಯಾಂಕ್‌ಲಿ ಕೆಲ್ಸ. ಕಂಡಕಂಡವರೊಟ್ಟಿಗೆಲ್ಲಾ ಡೊಂಡ್‌ಂಡ ಹೊಡ್ಕಂಡ್ "ಪಿಳ್ಳಿನ ಮೊದ್ವೆಗೆ ಬರೊಕು ಬಲ" ಅಂತ ಕುಸಿ-ಕುಸಿಲಿ ಹೇಳ್ತಿದ್ದೊ.

ನಂಟ್ರ್‌ಗ ಮನೆ ನೋಡಿಕೆ ಬಾದು ಆತ್. ಇವುನೂ ಅತ್ತ ಹೋಗಿ ಬಂದೊ. ಒಂದ್ ಒಳ್ಳ ದಿನ ಮೂರ್ತ ನೋಡಿ ಊರ್ನ ತಕ್ಕಮುಖ್ಯರೂ ಹತ್ತ್‌ಕುಟುಂಬ ಹದ್ನೆಂಟ್ ಗೋತ್ರ ಊರ್‌ಗೌಡ್ರೂ ನೆರೆಕರೆ ನಂಟ್ರ್‌ಗ ಎಲ್ಲ ಸೇರಿ ಗೌಜಿಲಿ ವೀಳ್ಯ ಸಾಸ್ತ್ರನೂ ಆತ್. ವೀಳ್ಯ ಸಾಸ್ತ್ರ ಕಳ್ದ್ ಮೂವತ್ತ್ ದಿನಕ್ಕೆ ಮೊದ್ವೆ ಅಂತ ವಾಗ್ದಾನನೂ ಆತ್. ಈ ಸಾಸ್ತ್ರ ಮುಗ್ಧ ಮೇಲೆ ಮೊದುವೆಗೆ ಮುಟ್ಟ ಹೈದನೂ ಗೂಡೆನೂ ಮೋರೆಗೆ ಮೋರೆ ಕೊಟ್ಟ್ ನೋಡ್ದು ಆಗಲಿ, ಮಾತಾಡ್ದು ಆಗಲಿ ಮಾಡಿಕಂಕೆ ಬೊತ್ತು ಗಡ ಅದ್ ಪಂಡ್‌ಂದ ನಡ್ಕಂಡ್ ಬಂದ ಸಂಪ್ರದಾಯ.

ಮೊದ್ವೆ ನಿಶ್ಚಯ ಆದ ಮೇಲೆ ಚೋಮಜ್ಜಿದೇ ಕಾರ್ಬಾರ. ಪಿಳ್ಳಿಗೆ ತೇಳಿ ಅಜ್ಜಿನ ತವ್ರುಂದ ಕೊಟ್ಟ ಹೆಸ್ರ್ ಹೇಳಿಕೆ ನಾಲಿಕೆ ಮೊಗಿಯದ ಚಿನ್ನದ ಮಾಲೆಗ, ಬೆಂಡ್‌ಗ, ಮೂಕ್‌ಬೊಟ್ಟು ಅದೆಂಥದೋ ಕಡಗ ಗಡ, ಅವ್ಲೆಕ್ಕಿ ಮಾಲೆಗಡ, ಏಲಕ್ಕಿ ಮಾಲೆಗಡ, ಗುಂಡುಗಡ, ತರಾವರಿ ಚಿನ್ನದ ಉಡ್ಗೊರೆಗಳ ಅಜ್ಜಿ ಪಿಳ್ಳಿಗೆ ಕೊಟ್ಟತ್. ಅಜ್ಜಿನ ಈ ಸಡ್ಗರ-ಸಂಬ್ರಮನ ನೋಡಿ ಮನೆ ಮಕ್ಕಳೂ... ಏನೂ ಮಾತಾಡದೆ ಕುಸಿಪಡ್ತಿದ್ದೊ.

ಅಂದ್‌ನ ಕಾಲದ ಮೊದ್ವೆ ಜಂಬರದ ಗಮ್ಮತ್ತ್ ಅದೆಷ್ಟ್ ಲ್ಯಾಕ್ ಎಂಥಾ ಸುಖಾ,

ಎಂಥಾ ಪೊರ್ಲು ಎಷ್ಟ್ ಗೌಜಿ ಗಮ್ಮತ್ತ್ ತೇಳ್ರೆ ಹತ್ತ್ ದಿನ ಮುಂದೆನೇ.. ಮುಡೆಂಜ ದಂಡ್‌ನ ಕಡ್ದ್ ಕೀಸಿ ಕಡೆಗುದ್ದಿ ಸುಣ್ಣದ ಬಣ್ಣನ ಮೊಣ್ಣ್‌ನ ಗೋಡೆಗಳಿಗೆ ಮೆತ್ತಿ, ಹೆಡೆಗೆಕಟ್ಲೆ ಸೆಗ್ಣಿನ ತಂದ್ ಬೀಜದ ಅಡ್ರ್‌ನ ಕರಿಗೆ ಹಳೇ ಬೇತ್ರಿ ಗುದ್ದಿ ನೆಲಕ್ಕೆ ಹಾಳೆ ತೊಟ್ಟ್‌ಲಿ ಕೆರ್ದರೆ ಕಪ್ಪಾಕು. ಬಳೀಗೋಡೆ ಕಪ್ಪುನೆಲ ಕುದ್ದವರ ಕುಂಡೆ ಅಂಡ್ ಮಿನಿ ನೋಡಿಕೆ ಬೊತ್ತು. ಸಣ್ಣ ಮಕ್ಕಂತೂ ನೆಲಲಿ ಹೊಣ್ಕಿ ಮಲ್ಕತ್ತ ಮೊಗ್ಗ್ದ್ ಮಾರ್ಣಮಿಗೆ ಕೊರ್ಗಜ್ಜನ ಯಾಸ ಹಾಕಿದಾಂಗೆ ಕಾಂಬೊ. ಕಡ್ಕಲ್ ಹೊರಿಕಾಗಿನೇ ರಟ್ಟೆಬಲದ ಗಟ್ಟಿಮುಟ್ಟುನ ಹೈದಂಗಳಿಗೆ ವಾರಕ್ಕೆ ಮುಂದೆನೇ ಹೇಳಿಕಳ್ಸ್‌ತಿದ್ದೊ. ನೆರೆಕರೆ ಊರವರ ಮನೆಂದ ಪಾತ್ರ್‌ಗ, ಅಂಡೆಗ, ಕಡಾಯಗ, ಕುಡ್ಪು ಜಳ್ಳ, ಕತ್ತಿ, ಸೆಡೆ, ಹೆರ್ಮಣೆಗಳ ಹೊತ್ತ್‌ಕಂಡ್ ದಾರಿಉದ್ದ ಗಣ ಗಣ ಆಡ್ಸಿಕಂಡ್, ಬೊಬ್ಬೆ ಹಾಕಂಡ್ ಕೊರ್ಚಿ ಆರ್ಬಾಯಿ ಕೊಟ್ಟ್‌ಕಂಡ್ ಹೋದರೆ ಇಡೀ ಬ್ಯೊಲ್‌ಗೇ ಗೊತ್ತಾಕು ಅದ್ ಮೊದ್ವೆ ಜಂಬರದ ಮನೆಂತ..! ಯಾವ ದೆವ್ವದ ಭಂಡಾರನೂ ಅಷ್ಟ್ ಲ್ಯಾಕ ಹೋಕಿಲೆ..! ಇನ್ನ್ ಬೇಂಚಿ ಹೊರಿಕೆ ಒಬ್ಬ; ಆ ಬೇಂಚಿ ಅಡಿಲಿ ಮೊಸಿ ತುಂಡುಲಿ ಬರ್ದ ಬೇಂಚಿ ಕೊಟ್ಟವನ ಹೆಸ್ರ್..! ಇದ್ದವರ ಚಾಳೆತೋಟಂದ ಎಳ್ದ್ ತಂದ ಹೊರೆಗಟ್ಲೆ ಮಡ್ಲ್‌ಗ, ಕಮ್ಮುನ ಗಂಬಗ. ಚಪ್ಪರದ ಸಂಪಡನ ಬಿಗ್ದ್ ಕಟ್ಟಿಕೆ ನಾರ್ಕಣೆ, ಬೊಳ್ನಾರ್, ಮೊಡ್ಪಳೆ ಬೊಳ್ಳಿಗ: ಉಂಬಕೆ ಕುದ್ರಿಕೆತೇಳಿನೇ ಬುಡಕಾಲ್‌ನ ಉದ್ದದ ಕಮ್ಮುನ ಮಳ್ಳೆಗ. ಅದರ ಹೊಟ್ಟೆ ಹೊರ್ಡ್‌ಸಿಕಂಡ್ ಹೊರಿಕೆ ನಾಕ್‌ಜನ..! ಮೊದ್ವೆಗೆ ಬಂದ ಹಿರಿತಲೆಗಳಿಗೆ ಮಾತ್ರ ಕುದ್ದ್ ಉಂಬಕೆ ಇದ್ದ ತುಕ್ಕ್ ಹಿಡ್ದ್ ದದ್ದಾದ ನಾಕ್ ಕಬ್ಬಿಣದ ಕುರ್ಚಿಗ! ಅಪ್ಪಿ–ತೊಪ್ಪಿ ಮಕ್ಕಮಿಲಿ ಎಲ್ಯಾರ್ ಅದರ್ಲಿ ಹತ್ತಿ ಉಂಬಕೆ ಕುದ್ದರೆ ಎಳ್ದ್ ಇಳ್ಸಿ ಕಮ್ಮುನ ಮಳ್ಳೆಗೆ ಹಾಕ್‌ತ್ತಿದ್ದೊ. ಚೆಡ್ಡಿ ಟೈಟ್‌ಮಿನಿ ಇದ್ದರೆ ಉಂಡ್ ಎದ್ರ್‌ಕನ ಅದ್ ಹರ್ದ್ ಲಂಗ ಆತಿತ್ತ್.

ಆ ಕಮ್ಮುನ ಬಾಗಲಿ ಚುರ್ಕರ ಕುದ್ದ್, ಪದ್‌ಂಜಿ ಪಾಯ್ಸನೂ, ಮಾಸದ ಗೈಪು, ಗಂಜಿ ಉಂಡ್ ಬೆಗ್ರ್ ಚೀಂಟಿಕಂಡ್ ಇನ್ನ್ ಯಾವ ಬಗೆ ಬಂದದೇಂತ ಪಾರ ಕಾದ್‌ಕಂಡಿರ್ಕನ... ಹಾಕಿದ ಚಪ್ಪರದ ಮಡ್ಲ್‌ಸೆರೇಂದ ಮುಸುಂಡುಗೇ ಹೊಡಿವ ಉರಿ ಉಟ್ಟಾಣ ಬಿಸ್ಲ್...! ಹಿಂದೆ ಪುಡೆನ ಮಳ್ಳೆಲಿ ಕುದ್ದ ಪೊರ್ಲುನ ಗೂಡೆನ ಬೆನ್ನ್‌ಗೆ ಬೇಕುಂತೇಳಿನೇ ತಾಂಗುಸುವ ಚೆಗ್ರ್ ಮೀಸೆ ಹೈದನ ಬೆನ್ನ್...! ಬಾಳೆ ಖಾಲಿ ಆಕನ ತಿರ್ಗಿ ತಿರ್ಗಿ ನೋಡಿ ಸಣ್ಣದರ್ಲಿ ಕಣ್ಣ್‌ಲೇ ನೆಗಾಡುವ ಹೈದಂಗಳೂ ಗೂಡೆಗಳೂ...! ಸಾರ್ ಖಾರ ಆತ್ ನೀರ್ ಬೇಕುಂತೇಳಿ ಕೈಕಾಲ್ ಮಿದ್ದ್‌ಕಂಡ್ ಕಿರ್ಚಿ ಮರ್ಡುವ ಹೊಡಿಮಕ್ಕ. ಅದೆಂಥಾ ಲ್ಯಾಕ್.

ಬಿಳೀ ತೋರ್ತ್ ಹೋಸಿ ಇಸಿದ ಹಳೇ ಕಾಲದ ಜೇನ್ ಪೆಟ್ಟಿಗೆನಾಂಗಿದ್ದ ಟೇಪ್ ರೆಕಾರ್ಡ್‌ಲಿ ಪದ್ಯ ಒಂದು ಪುಡೆ ಮುಗ್ದರೆ ಅದರ ತಿರ್ಗ್‌ಸಿ ಹಾಕಿಕೆ ಟೇಪುನ ದನಿನೇ

ಬರೊಕು. ಬೇರೆ ಯಾರಾರ್ ಕೈ ಹಾಕಿರೆ ಹಾಳಾದೂಂತ ಹೆದ್ರಿಕೆ..! ಯಾರ ಮನೆಂದೆಲ್ಲಾ ಸೀಮೆಣ್ಣೆ ಗ್ಯಾಸ್ ಲೈಟ್ ತಂದಳೊ ಅದ್ಕೆ ಅವವೇ ಗಾಳಿ ಹಾಕೊಕು. ಕೆಲೊವು ರಾತ್ರೆ ಹನ್ನೆರ್ಡ್ ಗಂಟೆಗೆ ಚುರ್ಕರ ಕುದ್ದ್‌ಕಂಡ್ ಗಾಳಿ ಹಾಕಿಕೆ ಸುರುಮಾಡ್ರೆ ಬೆಳ್ಗೆರ್ ನಾಕ್ ಗಂಟೆಮುಟ್ಟ...! ಕೆಮರಾದ ಬೊಳ್ಪು ಬೀಳ್ಕನ ಮಾತ್ರ ಕಿಸ್ಕ ಹಲ್ಲ್ ಬುಟ್ಟ್ ಪಟಲಿ ಲ್ಯಾಕ ಬರೊಕು ತೇಳ್ವ ಹೆಮ್ಮಕ್ಕ...! ಇನ್ನ್ ಗರ್ನಾಲ್ ಹೊಡೆಕೆನೇ ಒಬ್ಬ ಹೈದ; ಅವಂಗೆ ಒಂದ್ ಕಟ್ಟ್ ಬೀಡಿ..! ಹೊಡಿಯದ ಗರ್ನಾಲ್‌ನ ಹುಡ್ಕಿ ಹೆರ್ಕಂಡ್ ಬಾಕನೇ ಇರ್ವ ನಾಕ್ ಹೊಡಿ ಮಕ್ಕ...! ಹಸೆ ಬರೆವಂಗೆ, ಬಣ್ಣದ ಕಾಗದ ಕತ್ತೊರ್ರುಸುವವಂಗೆ ಏನೋ ಮೊರ್ಯಾದಿ. ಅವಂಗೆ ಸಣ್ಣ ಕತ್ರಿಮಿನಿ ಸಾಕಾಲ್ಲೆ. ಟೈಲರ್ ಅಂಗ್ಡಿದೇ ಆಕು. ಸೋಬಾನೆ ಹೇಳವ್ರ ಮಾತಾಡ್ಸುವಾಂಗೆ ಇಲ್ಲೆ. ಅವು ಹೇಳ್ದೇ ಸೋಬಾನೆ. ಮಾಡ್ದೇ ಸಾಸ್ತ್ರ. ಮತ್ತೆ... ದಿಬ್ಬಣ ಮೊರ್ದಿಬ್ಬಣ ತೇಳಿ ಒಂದೇ ಒಂದು ಜೀಪು. ಅದ್ ಬಾಕನ ಹೆಲಿಕಾಪ್ಟರ್ ಬಂದಟ್ಟೇ ಕುಸಿ. ಒಬ್ಬ ಓಡಿ ಹೋಗಿ ಬೋನೆಟ್ಟ್ ತೆಗ್ದ್ ರೆಡಿಯೇಟ್ರ್‌ಗೆ ನೀರ್ ಹೊಯ್ದರೆ ಮತ್ತೊಬ್ಬ ಬಾಳೆಕುರ್ಳೆ ಕಟ್ಟಿಕೆ ರೆಡಿ! ದಿಬ್ಬಣ ಬಾರದ ಮಕ್ಕ ಜೀಪುನ ಹಿಂದೆನೇ ಮೈಲ್ ದೂರ ಓಡಿ ಒಪಾಸ್ ಬಂದ್ ಬೊಚ್ಚೆಲ್ ತೆಗೆತಿದ್ದೊ. ಹಂದಿ ಸಳ್ಳಿ ಅಗೆಕಾಗಿನೇ ಬೀಜದ ಸರಾಯ ಕುಡ್ಕಂಡ್ ಸಿಂಡ್ ಬಂದ್‌ಕಂಡ್, ಬೆಗ್ರ್ ಆರ್ಸಿಕಂಡ್ ಬಾವ ಕೆಲೊವು ಸಣಪಂದರ್. ಪಂಥಕಟ್ಟಿಕಂಡ್ ಕುಡಿವ ಕಾವಂಗಗಟ್ಲೆ ಪದ್‌ಂಜಿ ಪಾಯ್ಸ. ಸೆಡೆಗಟ್ಲೆ ಮಾಸದ ಗೈಪು....! ತಿಂದ್ ಹೆರ್ಕಿಟ್ಟ ಬಾಳೆ ರಾಸಿ ಹಕ್ಕಲೆ, ತಿಂದ್ ತಿಂದ್ ಹೊಟ್ಟೆ ಬಾಮುಸಿಕಂಡ್ ಕಚ್ಚಿಕಂಡ್ ಕಚ್ಚಿಕಂಡ್ ಹೋಗಿ ಕಂಪಗದ್ದೆಗೆ ಬೀಳ್ವ ಹೊಗ್ಗುಲಿ ನಾಯಿಗ..! ದಿಬ್ಬಣದ ಗೂಡೆಗಳ ನೋಡಿಕಾಗಿನೇ ಬಾವ... ಮೀಸೆ ಹಣ್ಣಾದರೂ... ಮೊದ್ವೆ ಆಗದ ಹೈದಂಗ...! ಸೇ... ಅದೆಂಥಾ ಲ್ಯಾಕ..... ಎಂಥಾ ಪೊರ್ಲು...!! ಮೊದ್ವೆ ಕಳ್ದ್ ವಾರ ಆದರೂನೂ ಮುಗ್ಯದ ಗೌಜಿ ಗಮ್ಮತ್ತ್. ಈಗ ಅದ್ ಎಲ್ಲುಟ್ಟು ಹೇಳಿ..? ಜನಗಳ ಹಕ್ಕಲೆ ಎಲ್ಲ ಉಟ್ಟು ದುಡ್ಡು ಉಟ್ಟು... ಅಂದ್‌ನ ಸಡ್ಗರ ಇಂದ್‌ನ ದುಡ್ಡುನ ಕಟ್ಟದ ಒಳಗೆ ಸೇರಿ ಸರ್ವನಾಸ ಆಗ್ಟು. ಉದ್ದ ಸಾಲ್‌ಲಿ ನಿತ್ತ್‌ಕಂಡ್ ಹಾಳೆ ಬಟ್ಲ್‌ನ ಒಡ್ಡಿಕಂಡ್... ಬಾರದ ನೆಗೆನ ಬರ್ಸಿಕಂಡ್ ಅವು ಕೊಡ್ಕಿ ಕೊಡ್ಕಿ ಹಾಕಿದರ ತಿಂಬೊದರ್ಲಿ ಮೊದ್ವೆನೂ ಮುಗ್ತ್. ಜೀವನನೂ ಸಾರ್ಥಕ ಆತ್..!!.

ನಮ್ಮ ಚೋಮಜ್ಜಿಗೆ ಇದ್ ಸುರು. ಸುಳ್ಯ ಸೀಮೆಂದ ಕೊಡ್ಗು ಘಟ್ಟದ ಕಡೆಗೆನ ನೆಂಟಸ್ತಿಕೆ. ಹಾಂಗಾಗಿ ಕೊಡ್ಗುಲಿ ಮೊದ್ವೆ ಮಾಡುವಾಂಗೆನೇ ನನ್ನ ಪಿಳ್ಳೆಗೆನೂ ಮಾಡೊಕುತೇಳಿ, ಬಂದವ್ಕೆ ತಿಂಬಕ್ಕೆ ಉಂಬಕ್ಕೆಲ್ಲ ಕಮ್ಮಿ ಆಕೆ ಆಗದ್ ತೇಳಿ, ಮೊದ್ವೆಗೆ ಹಂದಿನೇ ಮಾಡ್ದೂಂತ ಒಂದ್...ಎರ್ಡ್ ಕಿಂಟಾಲ್ ಆವ ಹಂದಿನ ಹುಡ್ಕಿ ತಂದ್; ನಂಟ್ರ್‌ಗಳಿಗೆ ಮಾತ್ರನೇ ತೇಳಿ

ಹತ್ತ್ ಲೀಟ್ರ್‌ನ ಕಪ್ಪುಕ್ಯಾನ್ ಭರ್ತಿ ಬೀಜಣ್ಣ್ ಸರಾಯನೂ ಮಾಡಿಸಿತ್ತ್.

ಒಟಾರೆ ಪಿಳ್ಳಿ ಹತ್ತಿದ ಮನೆ ಲ್ಯಾಕಿರೊಕು. ಇಡೀ ಊರ್ಗೆ ಊರೇ ತಿರ್ಗಿ ನೋಡ್ವಂಥ ಮೊದ್ವೆ ಜಂಬರ ಆಕು ತೇಳಿ ಎಲ್ಲ ಕಡೆನೂ ಚೋಮಜ್ಜಿದೇ ಓಡಾಟ. "ಜಾಸ್ತಿ ನಡಿಬಡಿ ಅವ್ವಾ..." ಅಂತ ಮಕ್ಕ ಹೆದ್ರಿಸಿರೂ ಅಜ್ಜಿ ಅಂಡ್‌ನ ಹೊಣ್ಕ್‌ಸಿಕಂಡ್ "ಅಲ್ಲಿ ಅದ್ ಮಾಡ್" "ಇಲ್ಲಿ ಇದ್ ಮಾಡ್"ಂತ ಪರ್ಚಿಕಂಡ್ ನೆಲದ ಮೇಲೆ ಮಿನಿ ನಿಲ್ತಿತ್ತೆ. ಕೆಲೊವು "ಅಜ್ಜಿ ಇನ್ನೂ ಕೊಡದ ಗೂಡೆಗಳ್‌ಂದ ಜಾಸ್ತಿ ಚುರ್ಕೊಳೊಂತ" ಮಾತಾಡ್ತಿದ್ದೊ.

ಅಂತೂ ಮೊದ್ವೆ ಮನೆ ಬಾಳೆ ಕುರ್ಳೆ, ಮ್ಯಾನ ತೋರ್ಣ, ನಂಟ್ರ್‌ಗ, ಮಕ್ಕ ಮೊರಿ, ಇಸ್ ತೆಗಿ, ಇಡಿ ಪೊಡಿ ತೇಳಿ ಗಿಜಿ ಗಿಜಿ ತೇಳ್ದೆ. ಸುರುಗೆ ಎಣ್ಣೆಹಣ್ಸ್ಯಾಣ ಸಾಸ್ತ್ರ. "ಹತ್ತ್ ಕುಟುಂಬ, ಹದ್ನೆಂಟ್ ಗೊತ್ರ ಬಂಧ್ ಬಾಂದವ್ರ್, ನೆಂಟರ್ರಿಷ್ಟರ್ ಮುಂತಾಗಿ ಕೂಡ್ದ ದೇವಸಬೆಲಿ....... ಮೊದೊಳಿಗೆನ ಎಣ್ಣೆ ಹಣ್ಸ್ಯಾಣಕ್ಕೆ ಕುದ್ರುಸುವೆಂತೇಳುವೇ......." ತೇಳಿ ಊರ್‌ಗೌಡ್ರ್ ಗೂಡೆನ ಕುದ್ರಿಸಿದೊ. ಸುರೂಗೆ ಚೋಮಜ್ಜಿನೇ ಹೊಸಿದ ನಂದಾದೀಪಕ್ಕೆ ಸೇಸೆಕ್ಕಿ ಹಾಕಿ, ಗೂಡೆಗೂ ಸೇಸೆಕ್ಕಿ ಹಾರ್ಸಿ ಗರ್ಕೆ ಹುಲ್ಲುನೂ ತೊಳ್ಸಿಕೊಡಿ ಸೇರ್ಸಿ ಹಣ್ಸ್ಯಾಣ ತಿಕ್ಕಿ... ಮೊದ್ರ್‌ಂಗಿ ಊಟಂತೇಳಿ ಕೊಡಿ ಬಾಳ್ಳೆಲಿ ಎರ್ಡ್ ಸೆಡೆ ಪದ್‌ಂಜಿ ಪಾಯ್ಸನೂ... ಹುಗ್ಗೆನೂ ಉಂಡ ಚೋಮಜ್ಜಿಗೆ ಹನೀಸ್ ಹೊತ್ತುಲೇ ಉಬ್ಬೆಸ ಸುರಾಗಿ, ಮೇಲೆ ಹೋದ ಉಸ್ರು ಮೇಲೆನೇ... ಕೆಳೆಗೆ ಹೋದರೆ ಕೆಳೆಗೆನೇ.... ಕಣ್ಣ್‌ಗ ಬೇಳೆ ಮೊಗಿದರ ಕಂಡ್ ಮನೆವ್ಕೆಲ್ಲಾ ಹೆದ್ರಿಕೆ ಗಾಬ್ರಿ. "ಛೇ ಇಟ್ಟೊತ್ತ್ ಲ್ಯಾಕಿದ್ದ ಅಜ್ಜಿಗೆ ಈಗ ಏನಾತ್...? ಈ ಉರಿ ಉಟ್ವಾಣ ಸೆಕೆಗೆ ಪದ್‌ಂಜಿ ಪಾಯ್ಸ ಉಂಡರೆ ಅಜ್ಜಿನ ಅಪ್ಪ ತಡಿದಾ....?" ಅಂತ ಕೆಲೊವು ಮಾತಾಟ್‌ಕಂಡೊ. ಮೊದ್ವೆ ಮನೆಲಿದ್ದ ಗಲಗಲ ಗೌಜಿ ಚಪ್ಪೆ ಆಗಿ ಕಣ್ಣ್ ನೀರ್ಲಿ ಹೊರೆಗೆ ಬಾಕೆ ಸುರಾತ್. ರಪ್ಪ.... ಅದ್ಲ್‌ಂಞನ ಜೀಪು ಬಾಕೇಳಿ ಸುಳ್ಯ ಧರ್ಮಾಸ್ಪತ್ರೆಗೆ ತಕಂಡ್ ಹೋದೊ. ಕೊಂಡಾಟಲಿ ಸಾಂಕಿ ಬೆಳ್ಸಿದ ಚೋಮಜ್ಜಿ ಶುಭಕಾರ್ಯ ಮುಗ್ಯಕೆ ಮುಂದೆನೇ ಆಸ್ಪತ್ರೆಗೆ ಹೋದರ ಕಂಡ್ ಗೂಡೆ ದುಃಖಿಡ್ಸಿ-ದುಃಖಿಡ್ಸಿ ಮರ್‌ಡ್ತಿತ್ತ್. ಅಂತೂ ಆಸ್ಪತ್ರೆಗೆ ಎತ್ತಿರೆ ಅಲ್ಲಿ ಕಟ್ಟಣ ಮಾತ್ರ, ಡಾಕ್ಟ್ರ್ ಇಲ್ಲೆ..! ಕೆಲೊವು ಡಾಕ್ಟ್ರ ಮನೆಗೆ ಹೋಗಿ ಬಾಗ್ಲ್ ಬೊಟ್ಟಿ ಡಾಕ್ಟ್ರ ಕರ್ಕಂಡ್ ಬಂದೊ. ಬಂದ್ ನೋಡ್ರೆ..... ಚೋಮಜ್ಜಿನ ಕಣ್ಣ್ ಮುಚ್ಚಿ ಹೋಗುಟ್ಟು. ಶರ್‍ರ... ಕೋಟ ಹತ್ತಿಟ್ಟು....!

ಕೆಲೊವು ಈಗಳೂ ಹೇಳ್ವೆ... "ಅಜ್ಜಿ ನೊಡುದಾರಿಲೇ ಹೋಗ್ಟುಂತ. ಮತ್ತೆ ಕೆಲೊವು ಹೇಳ್ವೆ ಆಸ್ಪತ್ರೆಲಿ ಜೀವ ಬುಟ್ಟದ್‌ಂತ." ಒಳ್ಳ ಕಾರ್ಯ ನಡಿವ ಮನೆಲಿ ಅಶುಭ ಬೇಡಾಂತೇಳಿ 'ಬಂದ್ ಸೇರ್ದ ಜನಂಗ, ನಂಟ್ರ್‌ಗ, ಹೈದನ ಮನೆಕಡೆವು ಎಲ್ಲ ಸೇರಿ ಗೂಡೆನ ಮೇಲೆ ಇಲ್ಲ

ಸಲ್ಲದ ಹಾಕ್ಮಲೆ ಹೊಯ್ಮಲೆ ಅಪವಾದ ಹೇಳುವೊ ತೇಳಿ; ಚೋಮಜ್ಜಿನ ಶರ್‍ರನ ಧರ್ಮಾಸ್ಪತ್ರೆ ಮಂಚಲೇ ಎರ್ಡ್ ದಿನ ಇಸಿದ್ದೊ. ಕೇಳ್ದವ್ಕೆಲ್ಲ ಅವ್ವ ಉಸಾರುಟ್ಟೊಂತ ಹೇಳಿ ಸಂಗತಿನ ಗುಟ್ಟುಲಿಸಿದ್ದೊ. ತುಂಬುಪ್ರಾಯದ ಪೊರ್ಲುನ ಹಿರಿಜೀವ ಚೋಮಜ್ಜಿ ಪಿಳ್ಳಿಗೆ ಎಣ್ಣೆ ಹಣ್ಸ್ಯಾಣ ಸೇಸೆಕ್ಕಿ ಹಾಕಿ ತುಂಬಿದ ಎದೆಲಿ ಪಿಳ್ಳಿಗೆ ಆಶೀರ್ವಾದ ಮಾಡಿ ಹೇಳದೇ... ಸೊರ್ಗ ಸೇರಿದ್ದೊ...!

***

# ನಾನೂ, ಅವ್ವೂ..... ಮತ್ತೆ ಪ್ರೀತಿ...!

ಯಾವ ಹೆಸ್‌ರ್‌ನ ಹಂಗೂ ಇಲ್ಲದ "ನಾನೂ..." ಅದ್ ಅಲ್ಲರೆ ಅವ್ವ.... ಮತ್ತೆ 'ಪ್ರೀತಿ'ನ ಕಥೆ ಇದ್....

ಹೌದು ನನ್ನ ಇಪ್ಪತ್ತೈದ್ ವರ್ಷದ ಜೀವಮಾನಲಿ ಎಷ್ಟ್ ಇರ್‌ಲ್‌ಗಳ ನಿದ್ದೆ ಇಲ್ಲದೆ ನೆಮ್ಮೊದಿ ಇಲ್ಲದೆ ಕಳ್ದಳೆ. ಆ ರಾತ್ರೆಗಳಲ್ಲಿ ಹೊಟ್ಟೆ ಉಪಾಸ ಇರ್ತಿತ್. ಅವ್ವ–ಅಪ್ಪನ ಲಡಾಯಿ ಇರ್ತಿತ್. ಅಕ್ಕ–ತಮ್ಮ ತಲೆಜುಟ್ಟ್ ಹಿಡ್ದ್ ಹೊಡ್ಕಂಡ ಪೆಟ್ಟ್‌ನ ಗುರ್ತ ಇರ್ತಿತ್. ನಾಳೆನ ಕೆಲ್ಸದ ತಿಳುವಳಿಕೆ ಇರ್ತಿತ್. ಅಂದರೂ ಒಂಥರಾ ಸುಖ! ಆದರೆ ಇಂದ್‌ನ ರಾತ್ರೆ, ಅದೆಂಥಾ ಭಂಯ್ಯಕರ. ಅವ್ವ ಬಾಕೆ ಹೇಳ್ದ ಗಳ್ಗೆಗೆ ಇನ್ನ್ ಬೆರಿ ಎರ್ಡ್ ಗಂಟೆ ಮಾತ್ರ ಬಾಕಿ ಒಳದ್. ಗಂಟೆ ಈಗಳೇ ಹೆಚ್ಚಿಕಮ್ಮಿ ನಡಿರ್ಲ್ ಎರ್ಡ್ ಕಳ್ದುಟ್ಟು. ನನ್ನಂತ ದುರದೃಷ್ಟ ಒಬ್ಬನ ಬುಟ್ಟ್ ಇಡೀ ಪ್ರಪಂಚ ನಾಳೆನ ತಲೆಬಿಸಿ ಇಲ್ಲದೆ ಸುಖ ನಿದ್ದೆಲಿ ಮುಳ್ಗಿ ಹೋಗುಟ್ಟು. ಎತ್ತ ಕಡೆ ಹೊಣ್ಕೆ ಮಲ್ಗಿರೂ ನಿದ್ದೆ ಹತ್ತುಲ್ಲೆ. ಅಜ್ಜಿ ನರ್ಕುಕು ಕೇಳ್ದೆ. ಅಪ್ಪನ ಗೂರುವ ಸದ್ದ್‌ನೊಟ್ಟಿಗೆ ಅವ್ವ ಕನ್ಸ್‌ಲಿ ಎಂತದೋ ಮಾತಾಡ್ದೆ. ಅಕ್ಕಂದರ್ ಇಬ್ರೊಬ್ರೂ ಹೊದ್ದ್ ಮಲ್ಗ್ಯೆಲೊ.

ಹಾಂಗೆ ನಿಧಾನಕ್ಕೆ ಬಾಗ್ಲ್ ತಾಳ ತೆಗ್ದ್ ಸದ್ದಾಗದಾಂಗೆ ನಾ ಮೆಟ್ಟ್ ಇಳ್ದ್ ಜಾಲ್‌ಗೆ ಬಂದೆ. ಬಾನ ನನ್ನ ನೋಡಿ ಬಾಯಿ ಬುಟ್ಟ್ ನೆಗಾಡ್ದೆ. ಹುಣ್ಣಿಮೆ ಚಂದ್ರನ ಬೊಳ್ಪು ತನ್ನ ಹೊಳ್ಪುವ ನಾಲಿಕೆಲಿ ಇಡೀ ಜೀವರಾಶಿನನೆ ನೆಕ್ಕಿ ನೊಣ್ಚ್‌ವಾಂಗೆ ಕಂಡದೆ. ಅಡಿಮ್ಮೆ ಪುಡೆಲಿದ್ದ ಕಾಡ್‌ಮ್ಯಾನ ಮರದ ಮೇಲೆ ಬಿದ್ದ ದೈತ ಕರಿನೆಳೊಲು, ಅಜ್ಜಿ ಹೇಳುವ ಕಥೆಗಳ್ಲಿಬಾವ ಬ್ರಮ್ಮರಕ್ಕಸನಾಂಗೆ ಕಂಡತ್. ಗದ್ದೆ ಕೈಸಾಲ್‌ಲಿ ಎಸಂಡ್ ಹಿಡ್ಯಕೆ ಬಂದ ಗುಮ್ಮ ಮೂಳುವ ಸದ್ದ್ ಎಂಥವನ ಎದೆನೂ ಒಂದ್ ಚಣ ಹೆದ್‌ರ್ಸಿ ದರ್ಮುಸುವಾಂಗೆ ಕೇಳ್ತಾ ಉಟ್ಟು..!

ಜೋಡಿ ಕೆರೆಲಿ ಬೆಳ್ದ ಮೂಂಡಿಕೆಸನ ಹೋಕುನ ಚುಕ್ಕಿ ಚಪ್ಪಿಕೆ ಬಂದ ಕಾಡಂದಿಗಳ ಮೈನಾತದ ಮೂಕಳ್ಮೆಗೆ ಮೊರಿವ ಕೆಲೊವು ನಾಯಿಗಳ ಮರ್ತ. ಸಂಗತ್ತಕ್ಕೊಂದು ಸಂಗಾತಿನ ಹುಡ್ಕಾಟಲಿ ಇರುವ ಹಡ್ಲ್ ಗದ್ದೆ ತುಂಬಾ ರೆಂಕೆ ಬುಳ್ಗಿ ಮರ್ಪ್‌ಕಂಡ್ ಹಾರುವ ಸೀತೆಹಕ್ಕಿನ ಎದೆ ಒಳಗೆನ ಬೇನೆನ ಸೊರದೊಟ್ಟಿಗೆ, ನಾನ್ ಇಷ್ಟಪಟ್ಟ ಸೊತ್ತು, ನನ್ನ ಪ್ರೀತಿನ ಮುತ್ತು ಹೇಳ್ದ ಮಾತ್ ಗೇನ ಆದೆ. "ನೀ ಇಂದ್ ಬೆಳ್ಚರ್ ನಾಕ್‌ವರೆಗೆ ಸರ್ಯಾಗಿ ಸಂಪಾಜೆ ಗೇಟ್‌ಗೆ ಬಾ. ಪೇಪರ್ ಕಾರ್‌ಲಿ ಪೋಯಿ. ಯಾರಿಗೂ ಗೊತ್ತಾದುಲೆ. ನಾ ನನ್ನ ಬಟ್ಟೆಬರೆ ಸಮೇತ ಬನ್ನೆ. ನೀನೂ ನಿನ್ನ ಪೆಟ್ಟಿಗೆ ಸಾಮಾನ್ ಸಮೇತ ಬಾ. ಈ ಊರ್‌ಂದ ದೂರ ಪೋಯಿ. ನಂಗೆ ನಿನ್ನ ಬುಟ್ಟ್ ಇರಿಕಾದುಲೆ. ನಮ್ಮ ಪ್ರೀತಿ ಎಂತದ್‌ಂತ ತೋರ್ಸನೊ. ನೀ ನನ್ನ ಕೈ

ಬುಡ್ಬಡ. ನಾ ನಿನ್ನನೇ ನಂಬ್ಯಳೆ. ನಾ ನಿಂಗಾಗಿ ಗೇಟಕ್ಕಲೆ ಪಾರಕಾದನೆ" ತೇಳುವಂತ ನನ್ನ ಜೀವದ ಗೂಡೆನ ಜೀವನದ ನುಡಿಗಳ ನೆಂಪಾಗಿ ಹೆದ್ರಿಕೆಲಿ ಹದ್ಕಿ ಬೀಳುವಾಂಗಾತ್. ಆದರೂ ಅವ್ಳ ಬಿರ್ಸತಿಗೆನ ನೆನ್ಸಿ ಕುಷಿ ಆತ್. ನಾ ಒಬ್ಬ ಗಂಡಾಗಿ ಹೇಳಿಕಾಗದರ, ಮಾಡಿಕಾಗದರ ಅವ್ಳು ಮಾಡ್ತಾ ಉಟ್ಟಲ್ಲ. ಎಲ್ಲಿಂದ ಬಾತ್ ಇಂಥಾ ದೈರ ಅದ್ಕೆ; ಪ್ರೀತಿ ಹೀಂಗೆನಾ....?

ಒಂದು ಚಣ ಅವ್ಳ ಮಾತ್‌ಗಳ ನೆಂಪು ಮಾಡಿಕಂಡೆ. ಎದೆ ನಡ್ಗಿಗ್. ನಾಲಿಕೆ ಒಣ್ಗಿ ಪಸೆ ಆರ್‍ತ್. ಬೆರೀ ಪ್ರೀತಿ, ಭಾವನೆಗ, ಬೊದ್ಕು ಆಕೆ ಸಾಧ್ಯನಾ... ಬೆರಿ ಭ್ರಮೆಲಿ ಬೊದ್ಕುವ ಬೊದ್ಕು, ಅದ್ ಬೊದ್ಕು ಆಕೆ ಹೇಂಗೆ ಸಾದ್ಯ. ನಾವು ವಾಸ್ತವ ಜಗತ್ತ್‌ಲಿ ಇರೊವಲ್ಲಾ... ಕಣ್ಣ್ ಮುಂದೆ ನನ್ನ ಮನೆವರ ಚಿತ್ರ ತೇಲಿಕಂಡ್ ನೇಲಿಕಂಡ್ ಬಂದ್ ನಿತ್ತತ್.

ಮೊದುವೆ ಪ್ರಾಯಕೆ ಬಂದ ನನ್ನ ಎರ್ಡ್ ಜನ ಅಕ್ಕಂದರ್. ಗುಂಡಾನ್ ಬೊಳಿನ ಗೂಡೆ ಬೇಡಾಂತ ಹೇಳಿ, ಅವು ಹತ್ತಿದ ಮನೆಗೆ ಗುಂಡಾಂತರ ತಂದವೆಗಡಾಂತ ಹೇಳಿ, ಅಕ್ಕಂದರ ನೋಡಿಕೆ ಬಂದ ಎಷ್ಟೋ ಜನ ಕೈಲಾಗದ ಗಂಡ್ ಸಂತಾನ. ಆ ಗಂಡ್ ಸಂತಾನಗಳ ಮುಂದೆ; ಮುಂದೆನ ಜೀವನದ ಬಣ್ಣದ ಕನ್ಸ್‌ಗಳ ಹೊತ್ತ್‌ಕಂಡ್ ತಲೆ ತಗ್ಗ್‌ಸಿ ನೆಲನೋಡುವ ನನ್ನ ಅಕ್ಕಂದರ ಹೊಳಿವ ಕಣ್ಣ್‌ಗ ಬಾಡ್ದ ಮುದ್ದು ಮೋರೆಗ...!

"ಯಾಕೆ ನನ್ನ ಪಿಳ್ಳಿಕ್ಕಳಿಗೆ ಏನಾಗುಟ್ಟು. ಅವ್ಕೆ ರೂಪ ಇಲ್ಲೆನಾ, ಯವ್ವನ ಇಲ್ಲೆನಾ, ವಿದ್ಯೆ ಇಲ್ಲೆನಾ? ಗೂಡೆಗಳಿಗೆ ಗುಂಡಾನ್ ಬೊಳಿನ ಕಟ್ಟ್‌ಪಾಡ್ ಇದ್ದಾಂಗೆ, ಹೈದಂಗಳಿಗೆ ಯಾಕೆ ಆ ಕಟ್ಟ್‌ಪಾಡ್ ಹಾಳ್ ಸಂಪ್ರದಾಯ ಇಲ್ಲೆ. ಅವು ಹೆಣ್ಣಾಗಿ ಹುಟ್ಟಿದೇ ತೊಪ್ಪಾ..? ತೊನ್ನೂರು ಕಾಲಂದಲೂ ನಡ್ದ್ ಬಂದ ಈ ಸಮಾಜದ ಅನಿಷ್ಟ ಸಂಪ್ರದಾಯದ ಚಕ್ರ ನೆಲಕ್ಕುತ್ತಿ ಒಡ್ದ್‌ಹೋಗಲಿ" ತೇಳಿ, ಬೊಳ್ಪಿಗೆ, ಕತ್ತಲೆಗೆ ನೆಲಕ್ಕೈ ಹೊಡ್ದ್ ಶಾಪ ಇಸಿಕಂಡ್, ಬೊದ್ಕುನ ಕಡೇ ಗಳ್ಗೆಲಿ ಶರ್‍ರಕ್ಕೆ ಪಕ್ಷಪಾತ ಖಾಯಿಲೆ ಅಂಟ್‌ಸಿಕಂಡ್ ಒಲ್ಲಿ ಮೊಂದ್ರಿ ಹಿಡ್ದ ನನ್ನ ಅಜ್ಜಿ...!

"ಹೆಣ್ಣ್ ಹೆತ್ತದೇ ತೊಪ್ಪು. ಹೆಣ್ಣ್ ಹೆತ್ತದಂರ್ದನೇ ನಾವ್ಗೆ ಈ ಕಷ್ಟ ಬಂದದ್" ಅಂತ ಕಂಡ ಕಂಡ ಮೊದುವೆ ದಲ್ಲಾಳಿಗಳಿಗೆ "ನನ್ನ ಮಗಳಿಗೊಂದು ಗಂಡ್‌ನ ಹುಡ್ಕಿ ಕೊಡಿ ಅಣ್ಣಾಂತ" ಹೇಳುವ ಅದೇ ಬೇಜರಲಿ ತಲೆ ಮೇಲೆ ಕೈ ಹೊತ್ತ್‌ಕಂಡ್ ಕಣ್ಣೀರ್ ಅರ್ರುಸವ ನನ್ನ ಹೆತ್ತವ್ವನ ಚೆಕ್ಕ್‌ಗಟ್ಟಿದ ಮೋರೆ... ಗಂಡ, ಮಕ್ಕಳಿಗಾಗೇ ತನ್ನ ಅರ್ದ ಜೀವಮಾನ ಸುಖ ಸಂತೋಷನ ಎಲ್ಲಾ ಮರ್‍ತ್ ಜೀವನನ ಗಂಧ ತಳ್ದಾಂಗೆ ಎತ್ತಿ ಆಡ್ಸಿದ ಒಡ್ಡ ಅಂಗೈನ ಕೈಗ. ಮೂರು ಮಕ್ಕಳೂ ಹಿಂಡಿ ಹೀರಿ ಈಗ ಆರಿಹೋದ ನನ್ನವ್ವನ ಒಣ್‌ಗಿದ ಎದೆ....!

ಹುಟ್ಟಿದಲ್ಲಿಂದ ಇಲ್ಲಿವರೆಗೆ ಇನ್ನೊಬ್ಬನ ಮನೆಲಿ ಕೂಲಿ ಕೆಲ್ಸ ಮಾಡಿ, ಕಾಸ್‌ಗೆ

ಕಾಸ್ ಸೇರ್ಸಿ, ಪೈಸೆಗೆ ಪೈಸೆ ಕೂಡ್ಸಿ, ನನ್ನ ಮಕ್ಕಳೇ ನನ್ನ ಜೀವಾಂತ ತಿಳ್ಕಂಡ್ ಅವರ ಹೊಟ್ಟೆ ಬಟ್ಟೆಗಾಗಿ, ವಿದ್ಯೆ ಬುದ್ಧಿಗಾಗಿ ಸಾಲ, ಸೋಲ ಮಾಡಿ ಈಗ ಒಂದು ನೆಲೆಗೆ ತಂದ್ ನಿಲ್ಸಿದ ನನ್ನ ಅಪ್ಪನ ಶರ್ರದ ಬೆಗ್ರ್ ನೀರ್‌ನ ಹನಿಗಳ ಮರ್ತ್, ಆ ಸಂಬಂಧಗಳಿಗೆ ಎಳ್ಳ್ ನೀರ್ ಬುಟ್ಟ್ ನಾ ಹೊರ್ರು ಹೋದಾ...... ಛೆ.... ಎಂಥಾ ಸಂಕಟ.

ಇಷ್ಟ್ ವರ್ಷ ಕಷ್ಟನೋ ಸುಖನೋ, ಗಂಜಿ ನೀರ್ ವಿದ್ಯೆ ಬುದ್ದಿ ಕೊಟ್ಟ್ ಸಾಂಕಿ ಬೆಳ್ಸಿದ ನನ್ನ ಅಯ್ಯೆ, ಅಪ್ಪನ ಕಡೆಕಾಲಲಿ.. ನಾ ಹೀಂಗೆ ಪ್ರೀತಿಗಾಗಿ ಕಳ್ಳರಾಂಗೆ ಹಿಂದೆ ಬಾಗ್ಲಂದ ಕದ್ದ್ ಓಡಿಹೋಕಾ...? ಆ ಹಿರಿ ಜೀವಗಳ ಜೀವ ಒಳಿದಾ.... ಯಾಕೋ ಗೊತ್ಲೆ. ಈ ಹೊತ್ತ್ ದಾಟಿಕಂಡ್ ಬಂದ ಬಂದಾಂಗೇ ನಾಯಿಗ ಯಾಕೆ ಹೀಂಗೊಂದು ಪಾಂಗ್ ಕೊಟ್ಟವೆ. ಯಾದಾರ್ ಅಪಶಕುನದ ಸೂಚನೆ ಕಂಡರೂ ನಾಯಿಗಳಿಗೆ ಅದ್ ಮುಂದೆನೇ ಗೊತ್ತಾಗಿ ಹೋದೆಗಡ. ಅಂದರೆ ಈ ನಾಯಿಗಳ ಪಾಂಗ್ 'ನನ್ನ' ಮತ್ತೆ 'ಅವ್ಳ' ನಡುಲಿದ್ದ ಪ್ರೀತಿನ ಸೂತ್‌ಗದ ಸೂಚನೆನಾ......? ಹಾಂಗಾಕೆ ಬೊತ್ತು. ಹಂಗಾರೆ ನಾ ಅವ್ಳ ಇಷ್ಟಪಟ್ಟ್ ಪ್ರೀತಿ ಮಾಡ್ದ್ ಸುಳ್ಳಾ.....? ಏನೇ ಕಷ್ಟ ಬಂದರೂ ಕೈ ಹಿಡ್ದ್ ಕಾಪಾಡ್ನೆತೇಳುವ ಆಣೆ ಪ್ರಮಾಣಕ್ಕೆ ತೂಕ ಇಲ್ಲೆನಾ...? ನಾ ಒಬ್ಬನೇ ಹೀಂಗೆನಾ...? ಅಥವಾ ಪ್ರೀತಿ ಮಾಡ್ದೊವೆಲ್ಲಾ... ಇಂಥಾ ಸಂಕಟಕ್ಕೆ ಬಿದ್ದವೆನಾ...? ನನ್ನ ಅಕ್ಕಂದರ್ ಗೂಡು ಸೇರಿಕೆ ಮುಂದೆನೇ.... ನನ್ನ ಪ್ರೀತಿನ ಪಿಳ್ಳೆ ಒಡ್ಸಿ ಸಾಂಕೊಕಾ...? ಯಾಕೆ ಇಂಥಾ ಗಲಿಬಿಲಿ.

ಅವ್ಳ ರೂಪ ಮತ್ತೆ ಮತ್ತೆ ಕಾಡ್ತಾ ಉಟ್ಟು. ಹೂಂ... ಅವ್ಳ ಬಗ್ಗೆ ಹೇಳ್ದಾದರೆ ಅದ್ ನನ್ನ ಜೀವ. ಯಾದೋ ಒಂದ್ ಸಂಧರ್ಬಲಿ ಅದ್ ನನ್ನ ಕಣ್ಣೊಳೆಗಾಗಿ ಹೋಗಿ ಎದೆ ಒಳೆಗೆ ಇಳ್ದ್ ಅಡ್‌ಂಗಿ ಕುದ್ದತ್. ಹೊರೆಗೆ ಬಾ ಅಂತ ಎಷ್ಟ್ ಕೇಳಿಕಂಡ್ರೂ ಅಲ್ಲೇ ಕುದ್ದತ್. ಕಡೆಕಡೆಗೇ.... 'ಅವ್ಳು' ಕುದ್ದ ಜಾಗೆಂದ ಎದ್ದ್ ಹೋಗದೇ ಇರ್ಲಿಂತ ನಾನೂ ಕಂಡ ಕಂಡ ದೇವ್ರುಗಳಿಗೆಲ್ಲಾ ಕೈ ಮುಗ್ದಿದ್ದೆ. ಅದೆಂತದೋ ಹೇಳಿಕಣಿಕಾಗದ ಸುಖ...! ಅದೊಂದು ಪೊರ್ಲುನ ಕನ್ಸ್. ವಾಸ್ತವ ಜಗತ್ತ್‌ನ ಕಾಣದೆ ಭ್ರಮೆನ ಲೋಕಲಿ ಗಂಟಾಕಿ ಬಿಗ್ದ್ ಕಟ್ಟಿದ ಸಂಬಂಧದ ಬಲೆ! ಆ ಬಲೆನ ಕಣ್ಣ್‌ಗಳ್‌ಂದನೇ... ನಮ್ಮ ಕನ್ಸ್‌ಗ ಅರ್ಳಿ ಹೂ ಬುಡ್ತಿತ್ತ್. ಪ್ರತಿ ದಿನನೂ ಪ್ರತಿ ಗಳ್ಗೆನೂ ಅದ್ಕೊಂದು ಬಣ್ಣ ಬಂದ್ ಆ ಹೂಗೆ ಜೀವ ಬಾತಿತ್ತ್. ಜೀವ ಬಂದ ಹೂಗ ತುಂಬ ಹೆದ್ರಿಕೆಲಿ ಕಣ್ಣ್ ಮುಂದೆ ಇರುವ ಪ್ರಪಂಚನ ಕದ್ದ್ ಕದ್ದ್ ನೋಡ್ತಿತ್. ಯಾರಾರ್ ನಮ್ಮ ನೋಡಿ ನಮ್ಮ ಪ್ರೀತಿಗೊಂದು ಕಥೆ ಕಟ್ಟುವೆನಾ..? ಅಂತ ಹದ್ಕಿ ಬಿದ್ದ್ ನಡ್ಗ್‌ತಿತ್ತ್.

ಸೂರ್ಯ ದೇವ್ರು ಮೇಲೆ ಮೇಲೆ ಬಾತಾ ಇದ್ದೊ. ಸುತ್ತೊತ್ಲೊ ಫಲಗಾಳಿ ಬೀಸ್‌ತಿತ್ತ್. 'ನಾನೂ' 'ಅವ್ಳೂ' ತೇಳುವ ಪ್ರೀತಿನ ಹಕ್ಕಿಗ, ಹೊತ್ತ್ ಗೊತ್ತ್ ಇಲ್ಲದೆ ಕಾಲದ ಮಿತಿ ಇಲ್ಲದೆ,

ನಾಳೆನ ಬೆಚ್ಚ ಇಲ್ಲದೆ ನಮ್ಮದೇ ಆದ ಲೋಕಲಿ ಹಾಡಿಕಂಡ್, ಹಾರಿಕಂಡ್ ಕೊಣ್ಕಂಡ್ ಇರ್ಕನನೇ ವಾಸ್ತವ ಜೀವನದ ಈಡ್‌ಗಾರ ಗುರಿ ಇಸಿದ ಈಡ್ ಅವ್ವ ಮನೆಗೇ ಬಂದ್ ಬೀತ್. ಈಡ್‌ಗಾರನ ಬೇಡಟಕ್ಕೆ ನನ್ನ ಪ್ರೀತಿನ ಹಕ್ಕಿನ ಕಳ್ಸಿಕೊಡಿಕೆ; ಅದರೊಟ್ಟಿಗೆ ಒಂದು ಮಾತೂ ಕೇಳದೆ, ಸಣ್ಣ ಒಪ್ಪಿಗೆನೂ ತಕಣದೆ ಮೊದುವೆ ವಿಚಾರ ಮಾತಾಡ್ಡೊ. ಒಪ್ಪಿ ವೀಳ್ಯ ಕೊಟ್ಟ್‌ಕಂಡೊ. ಆದರೆ ಅವ್ವ ಪ್ರೀತಿನ ಸಂಗತಿ ಇತ್ತಲ್ಲ... ಮನೆವ್ಕೆ ಗೊತ್ತ್ಲೆ...! ಮನೆಲಿ ಇಂತದ್ಕೆಲ್ಲಾ ಆಸ್ಪದ ಇಲ್ಲೆ, ಮನೆಲಿ ಉಸ್ರು ಬುಡುವಾಂಗೆ ಇಲ್ಲೆ. ಅತ್ತ ಮೊದುವೆ ಆಗಿ ಒಲ್ಲದವನೊಟ್ಟಿಗೆ ಜೀವನ ಮಾಡಿಕಾಗದೆ ಹೊಡ್ಡಾಡುವ ಸಂಕಟ. ಇಲ್ಲಿ ಇನ್ನೊಬ್ಬಂಗೆ ಮನ್ಸ್‌ಕೊಟ್ಟ್ ಇಂದ್‌ನವರೆಗೂ ಪ್ರೀತಿನ ಮಳೆಲಿ ನಣ್ದ್ ಕೈ ಹಿಡ್ದವನ ಬುಟ್ಟ್ ಹೋಕೆ ಆಗದ ನರ್ಕ. ಇದೆಂಥಾ ಪರೀಕ್ಷೆ? ಕಡೆಗೂ ಅವ್ಳಿಗೆ ಎಲ್ಲದರ್ದಂ ಹೆಚ್ಚಿ ಪ್ರೀತಿನೇ ಕಂಡತ್ ಕಂಡದೆ. ತನ್ನ ಸುತ್ತೊಳು ಹಬ್ಬಿದ ಮುಳ್ಳುಬೇಲಿನ ಕಿತ್ತ್ ಹೆರ್ಕಿಟ್ಟ್ "ಬಾ ನಾವಿಬ್ಬೊರೂ ದೂರ ಪೋಯಿ... ಇವರ ಕಣ್ಣ್‌ಗೆ ಇನ್ನೆಂದೂ ಬೀಳ್ದು ಬೇಡಾ... ದೂರ ದೂರ ಪೋಯಿ" ತೇಳುವ ಮಾತ್‌ಗಳ್ಲಿ ತನ್ನ ಪ್ರೀತಿನ ಪಡ್ಕಂಬ ತೀವ್ರತೆನ ಹಂಬಲ ಇದ್ದರೂ... ನಾಳೆನ ಜೀವನ ಬೆರಿ ಪ್ರೀತಿನಾ..? ಅದ್ ಹೊಟ್ಟೆತುಂಬ್‌ಸಿದೆನಾ... ಅವ್ವ ನಂಬಿದ ಕುಟುಂಬದ ಕಥೆ.... ಅವ್ಳಿಗೆ ಯಾಕೆ ಇದೆಲ್ಲಾ ಗೊತ್ತಾದುಲೆ?

ನಾ ಯಾಕೆ ಇಂಥಾ ಎರಡರ್ಥದ ದ್ವಂದ್ವಲಿ ಸಿಕ್ಕಿ ಹಾಕಂಡೆ..... ಹಂಗಾರೆ ನನ್ನ ಮುಂದೆನ ದಾರಿ ಎಂತದ್? ಇಂಥಾ ಹೊತ್ತುಲಿ ಉದ್ಬವ ಆದ ಪ್ರಶ್ನೆಗಳಿಗೆ ಉತ್ತರ ಹುಡ್ಕುದು ಹೇಂಗೆ? ನನ್ನ ಬೊದ್ಕ್‌ನೊಳೆಗೆ ಆ ಒಂದ್ ಪೊರ್ಲುನ ಜೀವ ಬಂದ್ ಅದೇ ನನ್ನ ಜೀವನ ಸೊತ್ತಾಗಿ ಯಾಕೆ ಆತ್. ಅದ್ ಒಂದ್ ಸಮಯ ನಂಗೆ ಸಿಕ್ಕದಿದ್ದರೆ....? ಹಗ್ಲ್‌ಗ ಹೇಂಗೋ ಕಳ್ದ್ ದಾಟಿ ಹೋದೆ. ಆದರೆ ಬೇನೆ ತುಂಬಿದ ರಾತ್ರೆಗಳ ಕಳಿವ ದಾರಿ ಹೇಂಗೆ? ಗಾಯ ಕಾಲ ಕಳ್ದಾಂಗೆ ಮಾಯ ಆದೆ.... ಆದರೆ ಅದರ ಗುರ್ತ...?

ಹುಟ್ಟಿದ ಪ್ರತೀ ಜೀವಾದಿಗೂ ಬೊಳ್ಪು ಕೊಟ್ಟ್ ಕೈ ಹಿಡ್ದ್ ಕಾಪಾಡುವ ಆ ಸೂರ್ಯ ನನ್ನ ಮಾತ್ರ ಯಾಕಾಗಿ ಹೀಂಗೆ ಹರ್ದ್ ಕೀಂತ್ ಮಾಡಿ ಮುಕ್ಕಿ ನನ್ನ ಎದೆಗೆ ಬೇನೆ ಒಡ್ಡಿದೆ. ನನ್ನ ಬಾಳ್‌ನ ಕತ್ತಲೆ; ಅಮಾಸೆ ದಿನದ ಕರಿ ಕತ್ತಲೆಲೂ ಕಣ್ಣ್‌ಗೆ ಗೋಚರ ಆದೆ...

ಹುಟ್ಟಿ ಇಪ್ಪತ್ತೈದ್ ವರ್ಷ ಗಂಜಿ ನೀರ್ ಕೊಟ್ಟ್ ಸಾಂಕಿ ಮುದ್ದ್ ಮಾಡಿ ಬೆಳ್ಸಿದ ನನ್ನವ್ವ, ಅಪ್ಪ, ಅಜ್ಜಿ, ಅಕ್ಕಂದರ ಪ್ರೀತಿ ಅಕ್ಕರೆನ ನಡೂಂದ... ಈ ನಿನ್ನೆ ಮನ್ನೆ ನೋಡಿ ಪರ್ಚಯ ಆಗಿ ನೆಗಾಡಿ ಮಾತಾಡ್ದ ಗೂಡೆಗೆ ಹೈದನ ಪ್ರೀತಿ, ಹೈದಂಗೆ ಗೂಡೆನ ಪ್ರೀತಿನೇ ಯಾಕೆ ಮೇಲಾದೆ? ಅದರ್ಲಿ ಯಾವ ರೀತಿನ ಸೆಳ್ತ ಇದ್ದದೆ? ಹಂಗಾರೆ ಮನೆವರ್ದ್ ಪ್ರೀತಿ ಅಲ್ಲನಾ..? ನಿಜವಾಗಿ ಪ್ರೀತಿಲಿ ಎಷ್ಟ್ ತರ? ನಿಜವಾದ ಪ್ರೀತಿನ ಪಡಿವ ದಾರಿ ಹೇಂಗೆ?

ಹುಟ್ಟಿದ ಪ್ರತಿ ಒಬ್ಬ ಗಂಡ್‌ಗೂ... ಅಥವಾ ಹೆಣ್ಣ್‌ಗೂ... ಒಂದಲ್ಲ ಒಂದು ದಿನ ಪ್ರೀತಿ, ಸಂಗತ್ತ, ನಗೆ, ಕುಸಾಲ್, ಎಲ್ಲಾ ಬೇಕೇ ಬೇಕಾ...? ಇದ್ ಬೆರಿ ಮೊನ್ಷರ್‌ಲ್ಲಿ ಮಾತ್ರನಾ... ಅಥವಾ ಪ್ರಕೃತಿಲಿ ಜೀವ ತಳ್ದ ಸಾವ್ರ ಸಾವ್ರ ಜೀವ ಕೋಟಿಗಳ್ಲಿ ಕೂಡಾ ಹಿಂಗೆನಾ...? ಹಂಗಾರೆ ಮೂಕ ಪಶು, ಮುರ್ಗಗಳಿಗೆ ಇಂಥಾ ಒಂದು ಭಾವನೆ ಇರಿಕಿಲೆನಾ...? ನಮ್ಮ ಮನೆಲಿ ಇರುವ ಹಗ್ಲೂ-ರಾತ್ರೆ ಪಾರಕಾಯುವ ಆರ್ ವರ್ಷಂದ ಕಟ್ಟಿಹಾಕಂಡೇ ಸಾಂಕಿದ ಬೊಗ್ಗ ನಾಯಿನೂ... ಹೀಂಗೆನಾ...? ಅದ್ಕೂ ಒಂದು ಪ್ರಾಯ ಇಲ್ಲೆನಾ... ಅದ್ಕೆ ಭಾವನೆಗ ಬಾಕಿಲೆನಾ... ಅದ್ಕೊಂದು ಜೊತೆ ತರಮೊನೊತೇಳ್ರೆ 'ಶೇಕ್' ಬೇಡೇ ಬೇಡಾಂತ ಹಠ ಹಿಡಿವ ನಾವೂ, ನೀವೂ... ಅದರ ಮನ್ಸ್‌ನ ಬೇನೆನ ಯಾರೊಟ್ಟಿಗೆ ಹೇಳಿಕಂಕು...? ಹೋಗಲಿ ಸಾಂಕಿಕೊಂದು ಹಂದಿ ಮೊರಿ ತಂದರೆ ಅದ್ ಗಂಡ್ ಮೊರಿನೇ ಇರ್‌ಲಿ ತೇಳುವ ಮನೆ ಮೊಂದಿ ಅದ್ಕೆ ಯಾಕೆ ಜೊತೆನ ತಾದುಲೆ? ಅದೂ ಬೇಡ... ಪತ್ತನಾಜೆಗೆ, ಒತ್ತೆಕೋಲಕ್ಕೆ, ಇರ್ಣಮಾಸೆ, ಆಟಿ ಅಮಾಸೆಗೆ ಕಟ್ಟಿಕೆ ತೇಳಿನೇ, ಕೊಟೆಗೆನ ಒಂದು ಮೂಲೆಲಿ ಗೂಟ ಹೊಡ್ದ್ ಕಾಲ್‌ಗೆ ತಂಗೀಸ್ ಬೊಳ್ಳಿ ಹಾಕಿ ಕಟ್ಟಿ ಹಾಕಿದ ಕಟ್ಟದ ಹೂಂಜಂಗೆ ಒಂದು ಜೊತೆ ಬೇಡನಾ..? ಇವ್ಕೆಲ್ಲನೂ ಜೀವ ಇಲ್ಲೆನಾ...? ಅವ್ಕೂ ಪ್ರಾಯದ ಬದಲಾವಣೆ, ಬೇಜಾರ, ಪ್ರೀತಿ ಹುಟ್ಟುದ್ಲೆನಾ...? ನಾವು ಮೊನ್ಷರ್ ಮಾತ್ ಬಂದದೆ. ಆದರೆ ಅವು..? ನಂಗೆ ಇಂದ್ ಬಾಯಿ ಬಾದುಲೆ. ಆದರೆ ಅವ್ಕೆ ಯಾಗೋಳು ಬಾಯಿ ಬಾದುಲೆ.!

ಅಂದರೆ ನಾವೇ... ಅಂತ ಜಿವಾದಿಗಳ ಮೇಲೆ ಬಲವಾದ ಹಿಡ್ತ ಮಾಡ್ಯಳೊನಾ..? ಪ್ರಕೃತಿ ನಿಯಮನ ಬಲವಂತಲಿ ತಡ್ದ್ ನಿಲ್ಸ್ಯಳೊನಾ...? ಅವ್ಕನೂ... ಕಟ್ಟಿ ಹಾಕಿದ ಸಂಕಲೆ, ಬೊಳ್ಳಿ, ತುಂಡ್‌ಮಾಡಿ... ಓಡಿ ಹೋಕೆ ಸಾದ್ಯ ಮತ್ತೆ ಶಕ್ತಿ ಇಲ್ಲೆನಾ...? ಅವುನೂ ಸಂಬಂದಗಳ ನಡೂಲಿ ತಮ್ಮ ಅಸ್ತಿತ್ವನನೇ ಮರ್ತಳೊನಾ...? ಕೋಟಿ ಪ್ರಶ್ನೆಗ....! ಅಂದರೆ ನಾವೆಲ್ಲವೂ ಪ್ರಕೃತಿನ ಕೈಗೊಂಬೆಗನಾ...? ನನ್ನ ಜೀವನನ ನಾ ರೂಪ್‌ಸಿಕಂಡ್, ನಾ ಇಷ್ಟಪಟ್ಟವರೊಟ್ಟಿಗೆ ಬೊದ್ಕಿಕೆ ಹೋದರೆ ಯಾಕೆ ಈ ತರದ ಬಂಧನ..? ಹುಟ್ಟಿ ನೆಲಕ್ಕೆ ಬಿದ್ದ್ ಹೊಕ್ಕುಳು ಬೊಳ್ಳಿ ಕತ್ತ್‌ರ್ಸಿದಲ್ಲಿಂದ ಹಿಡ್ದ್... ಕಾಟಕ್ಕೆ ಹೋಗಿ ಕತ್ರಿಕುಂಟೆ ಇಸುವಲ್ಲಿವರೆಗೆ ಮಾತ್ರ ಸಂಬಂಧಗಳ ಬೇಲಿನಾ...? ಮತ್ತೆ ಬೆರಿ ನೆಂಪುನಾ...?

ಅಪ್ಪ-ಅವ್ವ, ಅಜ್ಜಿ, ಅಕ್ಕಂಗೆ ನನ್ನ ಪ್ರೀತಿ ಬೇಕು. ಕಡೆವರೆಗೂ ನಾ ಬೇಕು ತೇಳುವ ಹಂಬಲ ಹಂಗಾರೆ ಅವು ಸ್ವಾರ್ಥಿಗಳಾ...? "ನೀ ನನ್ನ ಬುಟ್ಟ್ ಬೇರೆ ಯಾರ್‌ನ್ನೂ ನೋಡಿಕಾಗದ್, ಮಾತಾಡಿಕಾಗದ್, ನನ್ನೊಟ್ಟಿಗೆನೇ ಬಾಳ್ವೆ ಮಾಡೊಕು ತೇಳುವ ಹಂಬಲಲಿರುವ ಅವಳ್ದ ಪ್ರೀತಿ ಅಲ್ಲನಾ...? ಹಂಗಾರೆ ಅವ್ಳು ಸ್ವಾರ್ಥಿನಾ...? ಅತ್ತ ಮನೆವರ ಪ್ರೀತಿನೂ ಬೇಕು. ಇತ್ತ ಇಷ್ಟಪಟ್ಟವರ ಪ್ರೀತಿನೂ ಬೇಕು. ಹಂಗಾರೆ ನಾ ಸ್ವಾರ್ಥಿನಾ...? ಒಟ್ಟಾರೆ ಆಗಿ ಇದ್ ನಾವ್ಗೇ

ಗೊತ್ತಿಲ್ಲದೆ ನಮ್ಮ ಸುತ್ತೊಳೂ... ಸುತ್ತಿಕಂಡ್ ಆಟ ಆಡ್ಸಿ ಕುಷಿಪಡುವ ಆ ಸೃಷ್ಠಿಕರ್ತನ ಮಕ್ಕಳಾಟನಾ...? ಒಂದೂ ಅರ್ಥ ಆದುಲೆ. ಒಟ್ಟಾರೆ ಪ್ರೀತಿ ತೇಳುವಂತದ್ ಸ್ವಾರ್ಥನಾ..? ಜೀವನನಾ...? ಅಥವಾ ಜೀವನದ ಒಂದು ಬಾಗನಾ...? ಈ ತಲೆ ತಿಂಬ ಪ್ರಶ್ನೆಗಳಿಗೆ ಉತ್ತರನೇ ಇಲ್ಲೆನಾ...? ಅಯ್ಯೋ ನಾ ಒಂದು ಜೀವ ಇಲ್ಲದ ಕರ್ಗಲ್‌ನೋ, ಪರ್ವತ ಗುಡ್ಡೆನೋ ಆಗಿದ್ದರೆ ಎಷ್ಟ್ ಲಾಯ್ಕಿತ್. ಆಟಿ ತಿಂಗಳ್ಲಿ ಹೊಯ್ಯುವ ಜಡಿಮಳೆನ ಲೆಕ್ಕಕ್ಕೆ ತಕಣದೆ ಹುಟ್ಟಿ ಬರ್ಲಿ ಅಲ್ಲಿ ಹುಲ್ಲು ಕಡ್ಡಿ ಜಿವಾದಿ! ನನ್ನ ಜೀವನಕ್ಕೊಂದು ಅರ್ಥ ಬರ್ಲಿ. ಈ ಮಾತ್‌ಲಿ ಸ್ವಾರ್ಥ 'ಇಲ್ಲೆ. ಸತ್ವ ಉಟ್ಟು. ದೇವ್ರು ಈ ಸಮಸ್ತ ಜೀವ ಕೋಟಿನ ಸೃಷ್ಠಿ ಮಾಡ್ತ್‌ಗಡ, ಹೌದಾ...? ನೀವೂ ಒಪ್ಪಿಕಂಡರೆ ನಾನೂ ಒಪ್ಪಿನೆ. ಆದರೆ ನಮ್ಮ ಮಾತ್ರ ಈ ಜಗತ್ತ್‌ಲಿ ಬೊದ್ಕಿಕೆ ಬುಟ್ಟ್ ಅಂವ ಎಲ್ಲೋ ಹೋಗಿ ಅಡ್‌ಂಗಿ ಕುದ್ದತ್. ಸತ್ಯ ಹೇಳ್ವಾದರೆ ಸೃಷ್ಠಿಮಾಡ್ದಂವ ನಾವು ಇರುವಲ್ಲಿವರೆಗೆ ಅವನೂ ನಮ್ಮ ಒಟ್ಟಿಗೆ ಇರೊಕಲ್ಲ? ಅಂವ ಎಲ್ಲಿ ಇದ್ದದೆ ಹೇಳಿ? ನಾಟಕಕಾರ ಅಂವ. ನಮ್ಮ ನಮ್ಮೊಲ್ಲೇ ತಂದಿಸಿ ತಮಾಷೆ ನೋಡ್ತ್. ನಾವೇ ಈ ಸಮಾಜಲಿ ಬೊದ್ಕೊಕು. ನಾವೇ ಬಾಳೋಕು. ಸಮಸ್ಯೆಗೆ ಪರಿಹಾರ ನಾವೇ ಕಂಡ್‌ಕಣಕ್ಕು..! ಅವನ ಮೇಲೆನ ಆಣೆಗೂ ಅಂವ ಬಾಕಿಲೆ..!

ಅರೆ.! ಗಂಟೆ ನಾಕ್ ಆಕಂಡ್ ಬಾತ್. ಬೊಳಿ ಬೊಳಿ ಬುಟ್ಟತ್. ಇನ್ನ್ ಅರ್ದ ಗಂಟೆಲಿ 'ಅವ್ಳ' ಗೇಟ್‌ಗೆ ಬಂದದೆ. ಹಾಂಗಾಗಿ ಅವ್ಳಿಗೆ ಕೊಟ್ಟ ಮಾತ್‌ಗೆ ನಾ ತಪ್ಪುದ್ಲೆ. ನಾ ಹೋನೆ ಅವ್ಳಕ್ಕಲೆ. ಆದರೆ ಬಟ್ಟೆ ಬರೆ ಸಮೇತ ಅಲ್ಲ. ಅವ್ಳ ಕರ್ಕಂಡ್ ಓಡಿ ಹೋಗಿ ಬಾಳ್ವೆ ಮಾಡಿಕೆ ಖಂಡಿತಾ ಅಲ್ಲ! ಅವ್ಳ ಪ್ರೀತಿನ ಕಣ್ಣ್‌ಂದ ಕಾಂಬ ಆಸೆಂದ. ಆ ಪ್ರೀತಿನ ಅನುಭವಿಸುವ ಸ್ವಾರ್ಥಂದ ಅಲ್ಲ..! ಅವ್ಳ ನಂಬಿದ ಅವ್ಳ ಸಂಸಾರ, ನನ್ನ ನಂಬಿದ ನನ್ನ ಕುಟುಂಬ, ನೆರೆಕರೆ, ಸಮಾಜಕ್ಕೆ ಹೆದ್ರಿ ಅಂತೂ ಅಲ್ಲ..... 'ನನ್ನ' 'ಅವ್ಳ' ಪ್ರೀತಿನ ಕಥೆನ ಲೋಕಕ್ಕೆ ತೋರ್ಸಿಕೆ. ಅದ್ಕಿಂದಳೂ ಹೆಚ್ಚಾಗಿ ನನ್ನ ಒಳೆಗೆನ ನನ್ನ ಕಂಡ್‌ಕಂಕೆ. ನನ್ನ ಉತ್ತರ ಇಲ್ಲದ ಪ್ರಶ್ನೆಗಳಿಗೆ ಉತ್ತರ ಕೊಟ್ಟ ಪ್ರೀತಿಗೆ..! 'ಅವ್ಳ' ಪ್ರೀತಿಗೆ 'ನನ್ನ' ಪ್ರೀತಿನ ಜವಾಬು ಕೊಟ್ಟು ಬಾಕೆ. ಹೋಗ್ತಾ ಒಳೆ. ಪ್ರೀತಿಲಿ ಆಶೀರ್ವಾದ ಮಾಡಿ...!!.

***

# ಕುಟುಂಬ

"ಪೂಜೆಗಿದ್ದ ಸಾಮಾನ್ಗಳೆಲ್ಲಾ ಅಣಿ ಮಾಡಿ ಜೋಡ್ಸಿ ಇಸ್ಯಳರಿನಾ... ಓ... ಇನ್ನೇನನೀಸ್ ಹೊತ್ತ್‌ಲಿ ಭಟ್ರ್ ಬಾಕೆ ಆತ್. ಆ ಕುಂಞಣ್ಣೆದ ಗೊಡ್‌ಂಜ ಕಾಯೆನ ತಕಂಡ್ ಬನ್ನೇಂತ ಹೋದವ ಎತ್ತೋತ್. ಹೋಗಿ ಗಂಟೆ ಅರ್ದ ಕಳ್ತ್. ಇನ್ನ್ ಎಟ್ಟೊತ್ತಿಗೆ ತ್ವಾರ್ಣಗೀರ್ಣ ಕಟ್ಟುದು. ಎಲ್ಲ ಆಕಂಡ್ ಭಾಕನ ಒಂದೊಂದ್ ಕೊಸ್ರಾಂಗೊಳ್ಳಿಗ. ಒಬ್ಬೊಬ್ಬ ಒಂದೊಂದ್ ದಿಕ್ಕ್‌ಗೆ ತಲೆ ಹಾಕಿ ನಡ್ದವೆ. ಇವ್ಕೆ ಸೊಯೆ ಮಿನಿ ಇಲ್ಲೆನಾ.....?"

ಹೀಂಗೇಂತೇಳಿಕಂಡ್ ಕುಟುಂಬದ ಪಟ್ಟೆದಾರ ಕೇಪಣ್ಣ ಗೌಡ್ರ್ ಎಲ್ಲ ಮನೆ ಮಕ್ಕಳ್ಗೆ ಒಂದೊಂದು ಕೆಲ್ಸ ವೈಸಿ; ನೀ ಅದ್ ಮಾಡ್; ಇಂವ ಇದ್ ಮಾಡಲೀಂತ ಹದಿ-ಕುದಿ ಮಾಡಿಕಂಡ್ ಒಳೊ. ಆ ದಿನ ಕುಟುಂಬೊಲಿ ಹಬ್ಬದ ಗೌಜಿ. ಎಟ್ಟೊ ಕಾಲದ ಹಿಂದೆ ನಡೆತಿದ್ದ, ಹರ್ಸೇವೆ, ದೆವ್ವದ ಕೋಲ, ತಂಬಿಲ ಎಲ್ಲ ಇನ್ನ್ ಒಂದ್ ವಾರಲಿ ನಡ್ದ್ ಹೊಸ ದೆವ್ವದ ಚೌಡಿ ಒಕ್ಕುಲಾಗಿ ನಾವ್ಗೆಲ್ಲ ಒಳ್ಳದಾವ ಕಾಲ ಬಂದದೆ. ಬಲ್ಮೆವ ಹೇಳ್ದಾಂಗೆ, ಕೋಲ ಒಕ್ಕುಲಿಗೆ ಮುಂದೆ ಮುಖ್ಯ ಪಟ್ಟ್ ಗಣೋಮನೂ ಸತ್ಯನಾರಾಯಣ ಪೂಜೆನೂ ಮಾಡೋಕು ತೇಳ್ದ ಪ್ರಕಾರಲಿ ಇಂದ್ ನಮ್ಮನೆ ಮೊಣ್ಣ್‌ಲಿ ಸುರೂನ ಶುಭಕಾರ್ಯ ನಡೆತೊಳದ್. ಹತ್ತ್ವರ್ಷ ಪಾಡ್ ಪಟ್ಟ್ ನರ್ಕ ಬಂದದ್ಕೆ ಇನ್ನಾರ್ ಈ ಭೂಮಿಲಿ ನಮ್ಮ ಮಕ್ಕಮೊರಿ, ದನಕರ್‌ಗ, ಬೆಳ್ದ ಬೆಳೆ ಎಲ್ಲ ಚಿಗ್ರಿನಿತ್ತ್ ಒಳ್ಳ ದಿನಗಳ ಕಾಂಬದಿನ ಬರ್ಲಿಂತ ಮನ್ಸ್‌ಲೇ ನೆನ್ಸಿಕಂಡಿರ್ಕನನೇ ಗೌಡ್ರ ಮನ್ಸ್ ಹತ್ತ್ವರ್ಷ ಹಿಂದೆಗೆ ಓಡ್ತ್.

ಬಿಳ್ಗಿಲ್ ಹಾಕಿ ಕುಡೆಕೆ ಕೊಟ್ಟ್ ಹಟ್ಟಿಗೆ ಕೂಡ್ದ ದನಂಗೆಲ್ಲ ಮಾರ್ನೆ ದಿನ ಬೊಳ್ಪಾಕನ ಒಂದೂ ಕಾಂಬಲ್ಲೆ. ಎಲ್ಲಿ ಹೋಗಳೋಂತ ಹುಡ್ಕೆಂಡೋಕನ ಅದ್ರ್‌ಕರೆಲಿ ಎರ್ಡ್ ಕಾಲ್, ತಲೆಗ ಎಲ್ಲ ಹೊಣ್ಕೆಂಡಿತ್ತ್. ಎಲ್ಲ ಜನಂಗ ಸೇರ್‍ದೋ. ಎಲ್ಲೊವೂ ಗುಸ್ಗುಸ್ ಮತಾಡಿಕಂಡ್ ಇದ್ ಹುಲಿನೇ ಹೊತ್ತಿರೊಕೂಂತ ಮಾತಾಟ್ದೊ. ಎಲ್ಲೊವೂ ದೇವ್ರ್‌ಗೊಂದ್, ಭಿನ್ನೆ ಮಾಡಿ ಅಂಗರಂಗೊಂದ್ ಕಾಯಿ ಒಡ್ದ್ ಇಂತಾ ಸುತ್ತ್‌ಕತ್ತಲೆನ ಇನ್ನ್‌ಮುಂದೆ ತಂದ್ ಒಡ್ಡ್‌ಬಡಪ್ಪಾಂತ ಚಾಮಿ ಮಾಡ್ದೊ. ಮಾರ್ನೆ ದಿನ ಬೊಳ್ಪಿಗೆ ಹಿಂದಕೆ ಕುಟುಂಬದ ದಾಮುನಲ್ಲಿ ಹಸ್ನೂಕರ್‍ನೂ ಸತ್ತೊಳೊ. ಅಯ್ಯನ ಬಂಡೆ; ಇದೆಂಥಾ ಕಥೆ.... ಇದಾಗಿ ಹನೀಸ್ ದಿನ ಕಳೆಕನ ಕುಟುಂಬದ ಕೆಲೊವು ಮನೆಗಳ್ಲಿ ಹಾವ್ಗ ಕಾಂಬೊಕೆ ಸುರಾದೊ. ಎಂತ ಕುರ್ದಿನೀರ್‍ನೂ ಮನೆ ಸುತ್ತ ಸಿಡ್ಕೆಂಡ್ರೂ ಆದಿ ಸುಬ್ರಹ್ಮಣ್ಯಂಗೆ ತಲೆಮ್ಮೆ ಮೀದ್ ಈಡ್ ತೆಗ್ದಿಸಿರೂ ಹರಿವ ಜಿವಾದಿಗ ಮನೆ ಬಾಗ್ಲ್‌ಗೆ ಬಾತಾ ಇದ್ದೊ. ಅದೆಲ್ಲಾ ಸುಡಲಿ; ಪ್ರಾಯಕೆ ಬಂದ ಕೆಳೆಗೆ ಹೈದ ಕಾರಣ

ಇಲ್ಲದೆ ಮೊದ್ದ್ ಕುಡ್ದ್ ಜೀವ ತಕಂಡತ್. ಹೋದಲ್ಲಿ ಬಂದಲ್ಲಿ ಮನೆ-ಮನೆವೇ ಕತ್ತಿದೊಣ್ಣೆ ತಕಂಡ್ ಹೊಡ್ಕಂಬಕೆ ನಿತ್ತೊ. ಎಲ್ಲೊವ್ಕೆ ಎದೆ ಬಳೆಗೆ ಪುಕು-ಪುಕು ಸುರಾತ್. ಯಾರೋ ಹೇಳ್ದೊ "ಹೀಂಗಾರೆ ನೀವು ಪೂರಾ ಕುತ್ತಿ ಅಡ್ಡ್ ಸಂತಾನ ಮುತ್ತಿ ಹೋದು ಕಂಡಿತಾ... ಕೆಲೊವು ಹೆಮ್ಮಕ್ಕಳ ಕಣ್ಣೀರ್ ನೋಡಿಕಾಲ್ಲೆ. ಎಲ್ಯಾರ್ ಒಂದ್ ಒಳ್ಳ ಕಡೆ ಬಲ್ಮೆ ನೋಡ್ಸುದು ಒಳ್ಳದ್. ಈ ಕಷ್ಟಂಗೆಲ್ಲ ಸುಮ್ಮಂಗೆ ಬಾಲ್ಲೆ. ಏನಾರ್ ಇದರ ಹಿಂದೆ ಇರೋಕೆ...!" ಇನ್ನ್ ಕೈಕಟ್ಟಿ ಕುದ್ದರಾಕಿಲೆ. ಏನಾರ್ ಪರ್ಯ್ಯಾರ ಮಾಡಿಕಂಕುಂತೇಳಿ "ಕೇರಳಂದ ಒಬ್ಬ ಬಲ್ಮೆಂವನ ಕರ್ಕಂಡ್ ಬಂದ್ ಅಷ್ಟಮಂಗಳ ಪ್ರಶ್ನೆ ಹಾಕಿ ನೊಡ್ದೊ; ಬಲ್ಮಂವ ಕವ್ಡೆ ಮೇಲೆ ಕೈ ಆಡ್ಸಿದೇ ಪುಸ್ರೊತ್ತ್... ಸುರ್ ಮಾಡ್ತ್ : "ನಿಮ್ಮೊದೊಂದ್ ಕುಟುಂಬನಾ...? ನಿಮ್ಮ ಐನ್ಮನೆ ಎಲ್ಲ ಎಲ್ಲಿ ಮೊಣ್ಣಾಗಿ ಹೋತ್. ನಿಮ್ಮ ದೆವ್ವ ದೇವ್ರಿಗೆ ನೆಲೆ ಇಲ್ಲೆ. ಯೆಂಕಟ್ರಮಣ ಮುಡ್ಪುಲಿದ್ದ ದುಡ್ಡುನ ತೆಗ್ದ್ ನಿಮ್ಮ ಹಿರೆವೂ ಹೆಂಡಕುಡ್ದ್ ಮಜಾ ಮಾಡ್ಯೊಳೊ. ಆ ದೋಷ ನೀವ್ಗೆ ಕಾಡ್ತಾ ಉಟ್ಟು. ಸುಮಾರಿನ್ನೂರೊರ್ಷದ ಹಿಂದೆ ನೀವು ಈ ಜಾಗೆಲಿ ಬಂದ್ ನಲೆ ಆಗಳರಿ. ನಿಮ್ಮ ಕುಟುಂಬದ ಒಂದು ಕೊಡಿ ಘಟ್ಟಲಿ ಹೋಗಿ ನೆಲೆ ನಿತ್ತಳೊ. ಅವರ ಹುಡ್ಕೆಂಡ್ ಬರೊಕು. ಸತ್ತ ಕೊಲೆಗೆಲ್ಲ ಮೊಕ್ಷ ಇಲ್ಲದೆ ಎದ್ದ್ ಕುದ್ದಳೊ. ಗುರುಕಾರ್ನೂರ್ಗೆ ಹರ್ಕೆ ಇಲ್ಲೆ. ದೆವ್ವಗಳಿಗೆ ಕಟ್ಟೆ, ಚೌಡಿ ಕಟ್ಸೊಕು. ಎಲ್ಲದಂರ್ದ ಜಾಸ್ತಿ ಕುಟುಂಬೊಲಿ ಒಗ್ಗಟ್ಟ್‌ಇಲ್ಲೆ. ಒಬ್ಬರ ದುಂಡುನ ಇನ್ನೊಬ್ಬಂಗೆ ನೋಡಿಕಾಲ್ಲೆ. ಮನೆಗಲ್ಲಿ ಶುಭಕಾರ್ಯ ನಡಿಕೆ ಮುಂದೆನೇ ಏನಾರ್ ಅದ್ಕೆ ಕೊಕ್ಕೆ ಬಂದ್ ಬಿದ್ದದೆ. ಹಾಂಗಾಗಿ ಆದಷ್ಟ್ ಬೇಗ ಏನಾರ್ ಖಡಗಟ್ಟ್ ಮಾಡದಿದ್ದರೆ ನೀವು ಸಂತಾನ ಮುತ್ತುದ ಖಂಡಿತಾ" ಅಂತ ಹೇಳಿ ಬಲ್ಮಂವ ಹೋತ್.

ಕುಟುಂಬದ ಪಟ್ಟೆದಾರ ಹಿರೆತಲೆ ಕೇಪಣ್ಣ ಗೌಡ್ರು ಎಲ್ಲ ಮನೆವರ ಕರ್ದ್ ಕುದ್ರ್ಸಿ ಸಮ್ದಾನಲಿ ಎಲ್ಲೊವ್ಕೆ ಹೇಳ್ದೊ..... "ನೋಡಿ ಬಲ್ಮೆಂವ ಹೇಳ್ದರ್ಲಿ ಎಟ್ಟ್ ಸತ್ಯನೋ... ಎಟ್ಟ್ ಸುಳ್ಳೋ ಗೊತ್ತೆ. ಆದರೆ ಪ್ರತೀ ಕುಟುಂಬಗಳ್ಲಿನೂ ಸೀಮೆಗೊಂದು ಜಾತ್ರೆ ಗ್ರಾಮಕ್ಕೊಂದ್ ನಡಾವಳಿ ಕುಟುಂಬಕ್ಕೊಂದ್ ಕೋಲಲದ ನೆಲೆ ಇದ್ದದೆ. ಈ ಸಂಗತಿನ ನೆಂಪಿಸಿಕಂಡ್ ನಮ್ಮ ಗುರುಕಾರ್ನೂರ್ನ ನೆನ್ಸಿಕಂಡ್ ನಮ್ಮ ದೆವ್ವ ದೇವ್ರಿಗೆ ನೆಲೆಮಾಡಿಕೊಡಿಕೆ ನಾವೆಲ್ಲೊವೂ ಒಂದಾಗೊಮೊ... ನಮ್ಮ ನಮ್ಮೊಲ್ಲೇ ಹರ್ಕೆ ಹಾಡ್‌ಗ ಒಳೊ. ಕುಟುಂಬದ ಹತ್ತ್‌ಜನರ್ಲಿ ಒಬ್ಬ ಬಾರದಿದ್ದರೂ ಅದ್ಕೆ ಫಲ ಸಿಕ್ಕುಲ್ಲೆ" ತೇಳ್ದೊ. ಇಷ್ಟ್ ಹೇಳ್ದೇ ತಡ ಒಬ್ಬೊಬ್ಬ ಒಂದೊಂದು ಒಳೆಗೆನ ಹುಳ್ಕುನ ಹೊರೆಗಾಕಿಕೆ ಸುರುಮಾಡ್ದೊ. ಮನ್ಸ್‌ನೊಳೆಗೆನ ಹುಳ್ಕುಗ ಒಂದಾ ಎರ್ಡಾ...?

ಅಣ್ಣ ತಮ್ಮೊಂದರೊಳೆಗೇ ಸೆರಿತ್ಲೆ. ಜಾಗೆ ಪಾಲಾಕನ ಬೊಳುಂವ ಹಲ್ಸ್‌ನ ಮರ

ನನ್ನ ಪಾಲ್ಗೇ ಬರೋಕೂಂತೇಳಿ ಜಗಳ. ಕೆಳೆಗೆ ಪುಡೆನ ಕೋಳ್‌ಂಜಿಗದ್ದೆ ನಂಗೇ ಬೇಕೂಂತ ಉರ್ಡಟ. ಅಯ್ಯಪ್ಪನ ಕಾಲ ಕಳ್ದಮೇಲೆ ಮನೆ ನಂಗೆನೇತೇಳುವಂತ ವಾದ. "ಲೆಕ್ಕ ಹಾಕಿರೆ ಅಣ್ಣನ ಪಾಲ್ಗೆ ನಾಕ್‌ಕೊಮ್ಮು ಜಾಸ್ತಿ ಬಂದುಟ್ಟು... ನಂಗೆಂತುಟ್ಟು" ಹೇಳೀಂತ ಪಂಚಾತಿಗೆನವರೊಟ್ಟಿಗೆನೇ ಜಗಳ. "ಸಣಪ್ಪ ಸತ್ತರೆ ನಾ ಒಂದ್ ಕೊಂಡೆ ಹಾಲ್ ಕುಡ್ದನೆ. ಆ ನಾಯ್ಯುಗ್ಟಟ್ಟಿದವಂಗೆ ಹಾವಾರ್ ಕಚ್ಚಿದರೆ"ತೇಳ್ವ ನೇರಲಿ ಮಂಜ ಆಕಾದಂವ..! ಆ ಬೇವರ್ಸಿನ ಕಾಲಡಿಗೆ ನಾ ಹೋಕಿಲೆ. ಬೇಕರೆ ಅವನೇ ನನ್ನಕ್ಕಲೆ ಬರ್‌ಲಿ. ಅಂವ....ಅಂವ..... ಸತ್ತರೆ ಅವನ ಬಾಯ್ಗೆ ಚಕ್ಕಳ ನೀರ್‍ಕೊಡಿಕೆ ನನ್ನ ಜೀವ ಇದ್ದರೆ ನಾ ಹೋಕಿಲೆ"ತೇಳ್ವ ಮನೆಲಿ ಹೇಳದೇ ಮೊದ್ವೆ ಆಗಿ ಹೆಣ್ಣ್‌ನ ಕರ್ಕಂಡ್ ಬಂದ್ ಪಾಲ್‌ಬೇಕೂಂತೇಳಿ ಮನೆ ಒಡ್ಡ ತಮ್ಮನ ನೋಡ್ದ ಅಣ್ಣ..! "ನನ್ನ ಜಾಗೆಲಿ ನಾ ಮಿನಿ ಚೌಡಿ ಕಟ್ಟಿಕೆ, ಕಟ್ಟೆಕಟ್ಟಿಕೆ, ಭಂಡಾರ ತಕಂಡೋಕೆ ಜಾಗೆ ಕೊಡಿಕಿಲೆ. ನಂಗೆ ಇರ್ದೇ ಇಟ್ಟ್. ಬೇಕರೆ ಒಳೊಲ್ಲಾ... ಕಂಡಿ–ಕಂಡಿ ಅಡ್ಕೆ ಕಾಯೆ ಫಸ್ಲ್ ತಕೊಂಬೊವು ಅವ್ವೇ ಕೊಟ್ಟ್‌ಕಣ್ಲಿ. ನನ್ನ ಕರಿದೂ ಬೇಡ, ನಾ ಬಾದೂಲೆ. ಅಂದ್ ನಂಗೆ ಎಲ್ಲೋವು ಸೇರಿ ಅಣ್ಣಿನ ಮೊದ್ವೆಲಿ ಹಾಕಂಡ್ ಹೊಡೆಕನ ಒಬ್ಬ ಕುಟುಂಬದನೂ ಬಾತ್ಲೆ ನನ್ನ ಬುಡ್ಸಿಕೆ. ಆಗ ಕುಟುಂಬದೊವು ಎಲ್ಲ ಎಲ್ಲಿ ಸತ್ತಿದ್ದೊ. ಕೇಸ್–ಕೂಟ, ಪೋಲಿಸ್‌ಂತ ನರ್ಕ ಬಂದ್‌ಕಂಡಿರ್ಕನ ಯಾರೂ ಇತ್ಲೆ. ಈ ಬುರ್ನಾಸ್‌ಗಳಕ್ಕೆಲೆ ನಾ ಬಾಕಿಲೆ ನನ್ನ ಕರಿದೂ ಬೇಡ. ಅಂದ್ ನನ್ನ ಎದೆ ಮೆಟ್ಟಿಕಂಡ್ ಬಂದೊವ್ಕೆಲ್ಲಾ ನಾ ಒಂದು ಒಳ್ಳ ಕಡೆಲಿ ಅವ್ಕೆ ಬೊತ್ತಿ ಮೊಡ್ಗ್ಯಳೆ. ಆ ಕಾಂತೂರ್‌ನಾಲ್ವೆರ್ ಒಳೊನಾ..... ಅವರ ಅವರ ನೆಸೆ..ನೆಸೆ.. ಎಳ್ದಾಂಗೆ ಎಳಿದು ನೋಡಾಂತೇಳಿ" ಕೋಮಣ ಬಿಗ್ದ್ ಎಡೆನೂಲುಗೆ ಸೆಕ್ಕುಸುವ ಕೃಷ್ಣ ಉಕ್ಕಪ್ಪ...! "ಅಂದ್ ದೆವ್ವ–ದೇವ್ರ ಚಿನ್ನಾಭರ್ಣ, ಮೊಗ, ಕಡ್ತಲೆ, ಮೂರ್ತಿಗಳ ಸಮೇತ ಹೊತ್ತ್‌ಕಂಡ್ ಹೋಗಿ ಅವನ ಅಟ್ಟಲಿ ಇಸಿಕಂಡತ್.... ನೋಡು ಈಗ ಅಂವನ ಪರಿಸ್ಥಿತಿ ಹೇಂಗಾತ್. ಸನಿಕುತ್ತ ಬುಟ್ಟದೆನಾ ಅವಂಗೆ ಹೇಳ್"ತೇಳಿ ಈಚೆವನ ಮೇಲೆ ಬೆರ್ಲ್‌ತೋರ್ಸಿ ನೆಗಾಡ್ವ ಆಚೆಂವ..! ನೀರ್ಗೆ ಜಗಳ, ದಾರಿಗೆ ಜಗಳ... ನೋಡ್ದೋವ್ಕೆ ಹಿಂಗೂ ಒಂದ್ ಕುಟುಂಬ ಉಟ್ಟಾಂತ ಅನ್ಸುವಂತ ಕುಟುಂಬ...!!

ಇಂಥಾ ಒಂದ್ ಕುಟುಂಬನ ಸರಿದಾರಿಗೆ ತರೊಕರೆ ಕೇಪಣ್ಣ ಗೌಡ್ರು ಪಡದ ಪಾಡ್ ಪಟ್ಟೊ. ಮನೆಮನೆಗೆ ಹೋದೊ. ಜನಗಳ ಸಮದಾನ ಮಾಡ್ದೊ. ಬುದ್ಧಿವಾದ ಹೇಳಿ ಎಲ್ಲವರ ಒಂದ್‌ಕಡೆ ಸೇರ್ಸಿ ಮಾತಾಡ್ದೊ. ಪ್ರತಿ ತಲೆಗೊಂದು ಐದ್ಯೆದ್ ಸಾವ್ರದಾಂಗೆ ಕೊಡೊಕು ತೇಳಿ ವಾರಕ್ಕೆ ಒಂದು ದಿನ ಬಿಟ್ಟಿ ಕೆಲ್ಸ ಮಾಡಿ ಆದಟ್ಟ್ ಬೇಗ ಹಿಡ್ದ ಕೆಲ್ಸನ ಮುಗ್ಸೊಕು ತೇಳ್ವ ಹಠಕ್ಕೆ ಬಿದ್ದೊ. ಸುರುಸುರೂಗೆ ಬುಡಾದೆ ಬಾತಿದ್ದ ಜನಂಗ ದಿನಾ ಹೋದಾಂಗೆ ಕಮ್ಮಿ ಆದೊ. ಒಬ್ಬ ಕೊಟ್ಟರೆ ಒಬ್ಬ ಕೊಡಿಕಿಲೆ. ಒಬ್ಬಂಗೆ ಕೋಳಿಕಟ್ಟ ಆದರೆ

ಮತ್ತೊಬ್ಬಂಗೆ ಇಸ್ಪೇಟ್. ಕೆಲೊವು ಹೂಡಿಕೆ ಬಾರದ ಹೋರಿಗ ಕಂಪಗದ್ದೆಲಿ ಕಂಪರ ನಿಗರಿ ಬಿದ್ದಾಂಗೆ, ಹೊರೆಗೆ ಹೊರ್ಡದೆ ಒಲ್ಲಿ ಒಳಗೆಂದಳೇ ಆದ್ವೈತಾನ ಸುರ್ಮಾಡ್ದೊ. ಆದರೂ ಗೌಡ್ರ್ ಹಠಕ್ಕೆ ಬಿದ್ದವರಾಂಗೆ ಮನೆ ಮನೆಗೆ ಮತ್ತೆ ಹೋದೊ. ಕೆಲೊವು ಅವರ ತಲೆ ಕಾಂಬಕನನೇ ಹಿಂದೆನ ಬಾಗ್ಲಂದ ಹೊರೆಗೆ ಹೋದೊ. ವರ್ಷ ಒಂದ್ ಕಳ್ದೋಗಿ ಎರ್ಡಾತ್ ಕೆಲ್ಸ ಗುಲ್‌ಗುಂಜಿನಟ್ಟೂ ಆತ್ಲೆ.

ಒಂದಿನ ದಾಮು ಬಂದ್ ಹೇಳ್ತ್ "ಆ ಬಲ್ಮೆಂವನ ಸಾವು. ಅವಂಗೆ ಸೆರಿ ಪಂಚಾಂಗಿಸಿಕೆ ಬಾದುಲೆ. ನನ್ನ ಹೆಣ್ಣ್‌ನ ಮನೆಕ್ಕಲೆ ಒಬ್ಬ ಒಳ್ಳ ದರ್ಶನಕಾರ ಉಟ್ಟು.... ಎಂತ ಸಮಸ್ಯೆಗ ಇದ್ದರ್ರೂ ಮುಚ್ಚಿದ ಕಣ್ಣ್ ಬುಡಿಕೆ ಮುಂದೆ ಪರ್ಯಾರ ಹೇಳ್ದೆ. ಬೆರೀ ಬಿಂಗಾರದಕ್ಕಿ ಹಿಡ್ಕಂಡ್ ಅಂವ ಹೊಡ್ಡಿಸಿದಾಂಗೆ ಸತ್ಯ ಹೇಳ್ದೆ. ಭಾರೀ ಕಮ್ಮಿನ ಖರ್ಚಿ" ತೇಳಿ ಕುಟುಂಬದವರ ಕೆಬಿ ಕುತ್ತ ಮಾಡ್ಸಿ ಅವನ ಕೊಂಬೋಲಗಲೇ ಕರ್ಕಂಡ್ ಬಾತ್. ಅಂವ ಬಂದಾಂಗೆ... ಮೈ ಕೊಡ್ಕಿ, ಸರ್ರss ದರ್ಪುಸಿ, ಸೇರ್ದ ಜನಗಳ ಕೆರ್ಕ್ಸಿರ್ಸಿ ನೋಡಿ ಕಣ್ಣ್‌ನ ಮೆಟ್ರೆ-ಮೆಟ್ರೆ ಹೊಣ್ಕ್ಸಿ; "ಕುಟುಂಬ ಸೆರಿಲ್ಲೆ. ನಿಮ್ಮನಿಮ್ಮೊಳಗೇ ಮಾಟ ಛಿದ್ರ ಮಾಡಿಕಂಡಳರಿ, ಸತ್ತ ಕೊಲೆಗೆಲ್ಲಾ ಎದ್ದ್ ಕುದ್ದಳೊ. ದೆವ್ವಕ್ಕೇ ಚಿನ್ನದ ಸುರ್ಗೆ ಆಕು. ಬೆಳ್ಳಿ ಮೊಗ ಆಕು. ಬಾಳ್‌ಕತ್ತಿ ತರೊಕು, ಕಂಚಿನ ಅಡ್ಯಾಣ ಆಕು. ಪಂಜುರ್ಲಿಗೆ ಹಂದಿನ ದುಂಡೇ ಆಕು. ಚೌಂಡಿಗೆ ಹಂದಿನೇ ಕಡಿಯಕು"ತೇಳಿ ಬಾಯಿಗೆ ಬಂದಾಂಗೆ ಬೊಗ್ಳಿ ಇದ್ದ ಹಾಲ್ತುಪ್ಪ, ಅಡ್ಕೆ-ಕಾಯಿ, ದುಡ್ಡು, ಪಂಚೆ, ಪಾತ್ರೆ ತೇಳಿ ಬಾಚಿ ಕಟ್ಟಿಕಂಡ್ ಹೋಗಿ ಅವನ ಹೆಂಗ್ಸಮಕ್ಕಳ್ಗೆ ಕೊಟ್ಟತ್. ಈಗ ಯಾರ ಉಸ್ಕುಡಮ್ಮು ಇಲ್ಲೆ.

ದಿನಂಗ ಹೋತಾ ಇದ್ದೊ. ಎರ್ಡ್ ಕಳ್ದ.... ಮೂರಾಗಿ... ನಾಕಾಗಿ ಪಂಚವಾರ್ಷಿಕ ಯೋಜನೆ ದಾಟಿರೂನೂ... ಒಂದ್ ಕೆಲ್ಸನೂ ಆತ್ಲೆ. ಹಿಂದಕ್ಕೆ ಹಟ್ಟಿಂದ ದನಂಗ ಕಾಣೆ ಆಕೆ ಸುರಾದೊ. ನಡೀರ್ಲ್ ಎಂತ ಎಂತದೋ ಬೊಳ್ಪುಗ ಕಾಂಬಕೆ ಸುರಾದೊ. ಹೇಂಟೆ ಮೊಟ್ಟೆನ ಕಚ್ಚಿ ಕುಡ್ದ್ ಕೂಂಗಿ ಹೂಂಜನ ನಾಳಿಗೆ ತಂದಿಸಿತ್.! ನಾಯಿಗ ರಾತ್ರಿಡೀ ಪಾಂಗ್ ಕೊಡಿಕೆ ಸುರ್ ಮಾಡ್ದೋ... ಗೌಡ್ರು ಮತ್ತೆ ಮನೆ-ಮನೆಗೆ, ಮನ್ಸ್-ಮನ್ಸ್‌ಗೆ ಹೋದೊ. ಪರಿಸ್ಥಿತಿನ ತರತರಲಿ ಬುಡ್ಸಿ ಬುಡ್ಸಿ ಹೇಳ್ದೊ. "ನಾವ್ಗಲ್ಲದಿದ್ದರೆ ನಮ್ಮ ಮಕ್ಕಳಿಗಾರ್ ಒಳ್ಳದಾಗಲೀಂತ ಹೇಳಿಕಂಡ್" ಕೈ ಮುಗ್ದ್ ಕಣ್ಣೀರ್ ಹಾಕಿದೊ. "ಇದರ ನಾವೆಲ್ಲೊವೂ ಸೇರಿ ಪುರೆಸನೊ. ಹಳ್ಳಕ್ಕೆ ಇಳ್ದ್ ಆಗುಟ್ಟ್ ಮೋಸಿ ದಾಟುದೊಂದೇ ದಾರಿ ಇಲ್ಲದಿದ್ದರೆ ನಾವ್ಗೆಲ್ಲಾ ಅಳಿ ಖಂಡಿತಾಂತ" ಹೇಳ್ದೊ. ಅಂತೂ ಗೌಡ್ರ ಮಾತ್ಗೆ ಹಾಂಗೂ ಹೀಂಗೂ ಒಲ್ಲದ ಮನ್ಸ್‌ಂದ ಈ ಸರ್ತಿ ನಮ್ಮ ಕುಟುಂಬದ, ದೆವ್ವ ದೇವ್ರು, ಐನ್ಮನೆ ಎಲ್ಲಾ ಮಾಡೇ

ತೀರ್ದೋಂದ ತೀರ್ಮಾನ ಮಾಡಿ ಮತ್ತೆ ಕೈ ಜೋಡ್ಸಿದೊ. ಹಗ್ಲ್, ಇರ್ಲ್, ಬೆಗ್ರಸ್ರಿ ಬಂಗ ಬಂದೊ. ಗೌಡ್ರಿಗೆ ಆನೆ ಬಲಬಂದಾಂಗಾತ್. ಸುರ್–ಸುರೂಗೆ, ಸಣ್ಣ ಸಣ್ಣ ಹರ್ಕೆ, ಪೂಜೆ ತಂಬಿಲಗಳ ಮಾಡ್ದೊ. ಕೇಪಣ್ಣ ಗೌಡ್ರ ಈಗ ತಡ್ದ್ ನಿಲ್ಸವೊನೇ ಇಲ್ಲೆ. ಎಲ್ಲೊವ್ಕೆ ಅವರ ಮಾತೇ ವೇದದ ವಾಕ್ಯ ಆತ್. ಐನ್ಮನೆ ಆತ್.. ಚೌಡಿನ ಕೆಲ್ಸ ಆತ್. ದೆವ್ವದ ಕಟ್ಟೆಗ ಎದ್ದ್ ನಿತ್ತೊ. ಬನಕ್ಕೆ ಬೇಕಾದ ಜಾಗೆನೂ ಸಿಕ್ಕಿತ್.

ಕೇಪಣ್ಣ ಗೌಡ್ರ್‌ಗೆ ಪಂಡ್‌ನ ಇತಿಹಾಸ ಎಲ್ಲ ಹಾಂಗೇ ಕಣ್ಣ್‌ಮುಂದೆ ಬಂದದೆ. ಪಟ್ಟಕಷ್ಟಕೆ ಇನ್ನ್ ಒಂದ್ವಾರಲಿ ಎಲ್ಲ ಒಕ್ಕುಲಾಗಿ ನಾವ್ಗೆ ಒಳ್ಳದಾವ ಕಾಲ ಬಂದದೆ. ಇಂದ್‌ನ ದಿನ ಮುಖ್ಯಪಟ್ಟ್ ಗಣೋಮನೂ.... ಸತ್ಯನಾರಾಯಣ ಪೂಜೆನೂ ಆಗಿ ಪೊರ್ಲ್‌ಲಿ ಬಂದ ಜನಂಗಳಿಗೆ ಯಾವ ತೊಂದರೆ ತಾಪತ್ರೆನೂ ಆಗದಿದ್ದರೆ ಸಾಕ್‌ಂತ ಮನ್ಸ್‌ಲೇ ನೆನ್ಸಿಕಂಡ್... “ಓಯ್.. ಭಟ್ರ್ ಬಂದೊ. ಅವ್ಕೆಲ್ಲಾ... ಯವಸ್ಥೆನೂ ಮಾಡಿಕೊಡಿಯಾ.... ಅಯ್ಯನ ಬಂಡೆ.... ಹೋಮಕ್ಕಿದ್ದ ಗೊಡ್ಗ್‌ಂಜ ಕಾಯೆನ ತಾಕೆ ಹೋದ ಹೈದ ಎಲ್ಲಿ ಹೋತ್. ಒಮ್ಮೆ ಹೋಗಿ ಅವನ ಕರ್ಕಂಡ್ ಬಾ. ಪೂಜೆಗೆ ಹೊತ್ತ್ ಮೀರಿ ಹೋದೆ” ಅಂತ ಹೇಳಿಕಂಡಿರ್ಕನನೇ.... ಕುಂಜಣ್ಣೈದ ದೂರಲಿ ಓಡಿಕಂಡ್ ಬಾದು ಕಂಡತ್ತ್. ಬಾರೀ ಅಂಬೇರ್ಪುಲಿ ಓಡಿ ಬಂದ್ ಸೇಂಕಿಕಂಡ್, ಬುಕ್ಕಿಕಂಡ್ ಹೇಳ್ತ್, “ತಾತ.... ತಾತ... ಕೆಳೆಗೆ ಬೊಮ್ಮಣ್ಣ ದೊಡ್ಡಪ್ಪ ತೀರಿ ಹೋದೊ ಗಡ....!!

****

# ಕೆಂಪು ಕಣ್ಣ್ ನೀರ್

"ಮಂಜಾ..., ನಂಗೊಂದು ಉಪಕಾರ ಮಾಡ್.... ಒಮ್ಮೆ ನೀ ಆ ಕಜೆಮನೆವರೊಟ್ಟಿಗೆ ಹೇಳ್; ಈ ಹಣ್ಣ್ ಪ್ರಾಯಲಿ ಒಂದು ಚಕ್ಕಳ ಕುಡಿಯಕೆ ನೀರಿಲ್ಲೆ ತೇಳ್ರೆ ಹೇಂಗೆ ಹೇಳ್...? ನಂಗೆ ಎಂತರ ಮಾಡೊಕು, ಯಾರೊಟ್ಟಿಗೆ ಹೇಳೊಕೂಂತ ಗೊತ್ತಾದುಲೆ. ನಿನ್ನ ಕಾಲ್ ಬೇಕರೆ ನಾ ಹಿಡ್ಕಣೆ...! ಆ ನೀರ್ ಗುಂಡಿನ ಅಂವು ಮುಚ್ಚುದು ಬೇಡಾಂತ ಒಮ್ಮೆ ಹೇಳ್. "ನೋಡು ಮಂಜ; ನಾ ಈ ಮೊಣ್ಣಿಗೆ ಬಂದ್ ಇಂದ್‌ಗೆ ಐವತ್ತೈದ್-ಅರ್ವೊತ್ತ್ ವರ್ಷ ಆಕಂಡ್ ಬಾತ್. ಯಾಂವನೊಟ್ಟಿಗೂ ನಾ ಇದುವರೆಗೆ ಆ ಸೌಕರ್ಯ ಮಾಡಿಕೊಡು, ಇದ್ ಮಾಡಿಕೊಡೂಂತ ಬೇಡ್ದಂವ ಅಲ್ಲ. ಆದರೆ ಇಂದ್ ನಂಗೆ ಕುಡಿವ ನೀರ್‌ಗೆ ಸೆರ್‌ಂಗ್ ಒಡ್ಡುವ ಕಾಲ ಬಂದುಟ್ಟು. ಈ ಮೊಣ್ಣು ಮನೆಸ್ಥಾನಲಿ ನೆಲೆನಿತ್ತ್: ನಾವು ಕೊಟ್ಟ್ ಕೊಂಡಾಡುವ ದೆವ್ವ ದೇವ್ರ ಮೇಲೆ ಆಣೆ ಮಾಡಿ ಹೇಳ್ನೆ ಮಂಜ...."ನಡಿವ ದಾರಿಗೂ ಕುಡಿವ ನೀರ್‌ಗೂ ಅಡ್ಡಿಮಾಡಿಕಾಗದ್ ಗಡ. ಸತ್ಯಕ್ಕೆ ಯಾಗೊಳು ಜಯ ಉಟ್ಟು. ದೇವ್ರು ಕಾಣದ ಕೋಣೆ ಇಲ್ಲೆ. ಈಗ ಅವ್ಕೆ ದುಡ್ಡುನ ಮದ ಉಟ್ಟು ನಂಗೆ ಗತಿ ಇಲ್ಲೆ. ನೋಡನೊ... ಈಗ ನಿಂಗೆ ದಮ್ಮಯ್ಯ ಹಾಕ್ತಾ ಒಳೆ. ಒಮ್ಮೆ ಹೋಗಿ ಆ ಕಜೆಮನೆ ಒಡ್ಕದ ಹೈದನೊಟ್ಟಿಗೆ ಹೇಳಿನೋಡು ಬಲಾ..." ಅಂತ ಗೌರಜ್ಜ ಅವರ ಎಳೆಕಾಗದ ಶರ್‍ರನ ಎಳ್ಕಂಡ್ ಬಂದ್, ಊರ್‍ಲಿ ನಾಕ್ ಜನ ಕರ್‍ದ್ ಮಾತಾಡ್ಸುವ, ತಲೆ ಬೊಗ್ಗ್‌ಸಿ ನಮಸ್ಕಾರ ತಕಂಬ, ನಾಕ್ ಜನಕ್ಕೆ ಕೈಲಾದ ಸಾಯ ಮಾಡುವ, ಕೆಲೊವೊಂದು ಪಾಲ್ ಪಂಚಾತಿಗೆ, ಸಂದಾನ ಸಮದಾನ ಮಾಡಿ ನಾಕ್ ಜನಕ್ಕೆ ಬುದ್ಧಿಮಾತ್ ಹೇಳುವ ಊರ್‌ನತಕ್ಕ ಆನಂದಣ್ಣನಕ್ಕಲೆ ಪುಕಾರ್ ತಂದೊ.

ಇದ್ ಇಂದ್‌ನ ಕಾಲಲಿ ಹೆಚ್ಚಿಕಮ್ಮಿ ಒಂದಲ್ಲ ಒಂದು ಮನೆಲಿ ದಿನಂಪ್ರತಿ ನಡೆವ ಪರ್ಸಂಗ. ಇದ್ ನಮ್ಮಲ್ಲಿನೂ ಉಟ್ಟು, ನಿಮ್ಮಲ್ಲಿನೂ ಇರ್ದು. ಅಂವನ ಜಾಗೆಲಿ ಇಂವ ದಾಟಿಕೆ ಬೊತ್ತು. ಆಚೆವನ ಹಂದಿ, ಕೋಳಿ, ನಾಯಿಗ ಬಂದರೆ ಇಂವ ಕಾಯರ ತೊಪ್ಪೆಗುದ್ದಿ ಮೊದ್ದಿಸುದು; ದನಂಗಳ ಕಾಲ್‌ಗಂಟಿಗೆ ಕಡ್ಪತ್ತಿ ಬೀಸಿ ಹೊಡಿದು, ಅವಂಗೆ ದಾರಿ ಕೊಡಿಕಿಲೆ, ಮಾರ್ಗ ಬುಡಿಕಿಲೆ, ಕತ್ತಲೆ ಕತ್ತಲೆ ಆಕನ ಎರ್‍ಡೂ ಕಡೆಂವು ಬೊಯ್ಕಂಬೊದು, ಉರ್ದಪತ್ತ ಮಾಡಿಕಂಬೊದು, ನನ್ನ ಜಾಗೆಲಿ ಹರಿವ ನೀರ್‌ನ ಅವಂಗೆ ಬುಡಿಕಿಲೆ, ಕಾಂತೂರಿಗೆ ಹೋದು, ಧರ್ಮಸ್ಥಳಕ್ಕೆ ಹೋದು, ಅಯ್ಯೋ ರಾಮ ಒಂದಾ, ಎರ್‍ಡಾ... ನೂರು!

ಗೌರಜ್ಜಿದೂ ಅದೇ ಗೋಳು. ತಲೆ ತಲಾಂತರಂದ ತೊನ್ನೂರು ಕಾಲಂಗಳೂ... ಗೌರಜ್ಜನ ಮನೆವ್ಕೆ ಕುಡಿಯಕೆ, ದಿನ ಬಳ್ಸುವ ಕೆಲ್ಸಕ್ಕೆ ನೀರ್ ಕಜೆಮನೆವರ ಜಾಗೆಂದಳೇ

ಹರ್ದ್ ಬಾದು. ಹಾಂಗೆಂತೇಳಿ ಅದ್ ಕೆರೆ ನೀರೂ ಅಲ್ಲ, ಬಾಮಿ ನೀರೂ ಅಲ್ಲ. ಹರಿವ ಒರ್ತೆ ಚೋಡಿ ನೀರ್. ಕಜೆಮನೆವರ ಜಾಗೆ ಮೇಲ್ಮೈ ಪುಡೆಲಿ ಉಟ್ಟು. ಗೌರಜ್ಜಿನ ಬೇಲಿಕೋಲು ಅಡಿಮೈಲಿ ಉಟ್ಟು. ಹರಿವ ನೀರ್‌ಗೆ ಯಾವ ದೊಣ್ಣೆನಾಯಕನ ಅಪ್ಪಣೆ. ನೀರ್ ಹರಿವ ನಿಯಮನೇ ಹಾಂಗೆ ಅಲ್ಲಾ... ಎತ್ತರಂದ ಅಡಿಮೈಗೆ ಹರ್ದ್ ಬಾದು ಪ್ರಕೃತಿ ನಿಯಮ. ಅಂತ ನೀರ್‌ನ ಯಾದೇ ಕಾರಣಕ್ಕೂ, ಯಾದೇ ಸಮಯಲೂ, ತಡಿಯಕೆ ಬೊತ್ತೂಂತ, ಮಳ್‌ಗಾಲಲಿ ನೀರ್ ಜಾಸ್ತಿ ಆಗಿ ಚೋಡಿ ತುಂಬಿ ಹೆಚ್ಚಿಕಮ್ಮಿ ಆದರೆ ಎರ್ಡು ಕಡೆವೂ ಕೂಡಿ ಆಡಿಕಂಡ್ ಸರಿಮಾಡಿಕಂಕೂಂತ; ಅರ್ಕಿಲ್ ಚೋಡಿ ಆರಿಹೋದರೂ ಆ ಒರ್ತೆಗುಂಡಿನ ನೀರ್‌ನ ಗೌರಜ್ಜಿನ ಮನೆವು ಬಳ್ಕೆ ಮಾಡಿಕಂಕ್‌ಂತ; ಗದ್ದೆ ಬೇಸಾಯ, ಪಗಾರ ಪುಂಡಿಬಿತ್ತ್, ಕೂಡಿ ಆಡಿ ಕೆಲ್ಸ, ನಗೆ, ಕುಶಾಲ್, ಪ್ರೀತಿ ವಿಶ್ವಾಸ, ಮೊನ್ಷತ್ವ ಲ್ಯಾಕಿದ್ದ ಪಂಡ್‌ನ ದಿನಲಿ ಊರ್ನ ಪಟೇಲ್ರ ಮುಖ್ಯಸ್ಥಿಕೆಲಿ ಎರ್ಡೂ ಕಡೆವುನೂ ವಾಗ್ದಾನ ಮಾಡಿಕಂಡಿದ್ದೊ. ಮನೆ ಮನ್ಸ್‌ಲಿ ಯಾದೇ ವಿಷದ ಬಿತ್ತ್‌ನ ಬೆಳೆಕೆ ಬುಡದೆ ಲ್ಯಾಕಲಿ ಬೊದ್ಕಿಕಂಡ್, ಮಾತ್‌ನ ಪ್ರಕಾರ ನಡ್ಕಂಡ್ ಬಂದಿದ್ದೊ.

ಕಾಲ ಬದಲಾತಾ ಇತ್ತ್. ನಿನ್ನೆ ಕಂಡದ್ ಇಂದ್ ಇರ್ದುಲೆ. ಇಂದ್ ಇದ್ದದ್ ನಾಳೆ ಇರ್ದುಲೆ. ನಾಳೆದ್ ನಾಳ್ದ್‌ಗೆ ಪೂರಾ ಬೇರೆ ಬೇರೆ ಆದೆ. ಹಾಂಗೆನೇ ವಾಗ್ದಾನ ಆಗಿ ಸುಮಾರ್ ವರ್ಷ ಕಳ್ದಮೇಲೆ ಕಜೆಮನೆ ಯಜಮಾನನೂ, ಯಜಮಾಂತಿನೂ ಸೊರ್ಗಕ್ಕೆ ಹೋಗಿ ಮಕ್ಕ ನರ್ಕದ ದೀಪ ಹೊತ್ತ್‌ಸಿ ದೂತರಾದೊ. ಅವವೇ ಎತ್ತ್‌ಕಟ್ಟಿ ಗದ್ದೆ ಹೂಡಿ ಬೇಸಾಯ ಮಾಡಿ, ಸುಗ್ಗಿ, ಏಣೆಲ್ ಅಕ್ಕಿನ ಗಂಜಿ ಉಂಡ್ ಅರ್ಗ್‌ಸಿಕಂಬತ್ತಿದ್ದ ಕಾಲಲಿ ಮಾಡ್ದ ವಾಗ್ದಾನ ಇಂದ್ ರಬ್ಬರ್, ಕಾಫಿ, ಅಡ್ಕೆನ ತಿಂಬಕೆ ಸುರುಮಾಡ್ದ ಮೇಲೆ ಮೊಯಿಂಸ ಪೂರಾ ಕುಟ್ಟೆ ಎದ್ದ್ ಹೋಗಿ, ಕೊಟ್ಟ ಮಾತ್‌ನ ತೊಪ್ಪಿ, ಮೊತಿ ಕೆಟ್ಟ್ ಆಸ್ತಿ ಪಾಲಾಗಿ ಸಿಕ್ಕಿದ ಪಾಲ್‌ಲಿ ರಬ್ಬರ್, ಕಾಯೆ, ಅಡ್ಕೆ, ಕಾಫಿ, ಮೆಣ್ಸ್ ಬೆಳೆಕೆ ಸುರುಮಾಡಿ, ದುಡ್ಡುನ ಮದನನೇ ಹೊಟ್ಟೆಗೆ ತಿಂಬ ಕಾಲಲಿ ಮಕ್ಕಳ ಕಣ್ಣ್ ಕುರ್ಡಾಗಿ ಮನ್ಸ್ ಮಸಣಾಗಿ ಪಾಪದ ಗೌರಜ್ಜಿಗೆ ಉಪದ್ರ ಕೊಡಿಕೆ ಸುರು ಮಾಡ್ದೊ. "ಅಜ್ಜಿ ಈ ಒರ್ತೆ ಗುಂಡಿನ ಮುಚ್ಚಿ, ಚೋಡಿನ ತಿರ್ಗುಸುವೆ. ನೀ ಬೇಕರೆ ಕೆರೆ ತೆಕ್ಕ ಇಲ್ಲೆ ಬಾಮಿ ತೆಕ್ಕ. ಈ ಒರ್ತೆಗುಂಡಿನ ಜಾಗೆಲಿ ಎರ್ಡ್ ಮೂರು ರಬ್ಬರ್ ದೈ ನೆಡಕ್. ನೀ ಏನ್ ಮಾಡಿಯಾ ಗೊತ್ತೆ, ನಾಳೆ ಗುಂಡಿ ತೆಗೆವು ಬಂದವೆ. ನಮ್ಮ ಒಡ್ಜಿಲ್ ಜಾಗೆಂದ ಕೆಳಗೆ ನೀರ್ ಹರಕೆ ನಾವು ಬುಡಿಕಿಲೆ. ತೇಳುವಂತ ಹಾಂಕಾರದ ಮಾತ್ ಗೌರಜ್ಜಿನ ತಲೆ ಕೆಟ್ಟ್ ಮೊತಿ ತೊಪ್ಪುಸುವಾಂಗೆ ಮಾಡಿ; ಇದುವರೆಗೂ ಯಾರ ಕಾಲಡಿಗೂ ಹೋಗಿ ಬೇಡಿ ಗೊತ್ತಿಲ್ಲದ ಗೌರಜ್ಜಿ ಬೊಳ್ಪು, ಬೊಳ್ಪಾಕನ ಆನಂದಣ್ಣನ ಮನೆಗೆ ಬಂದ್ ಮನ್ಸ್‌ಲಿದ್ದ ಹೊಟ್ಟೆಉರಿ ಸಂಕಟನ ಹೇಳಿಕಂಡಿತ್ತ್.

ಇದ್ದ ಎರ್ಡ್ ಮಕ್ಕ ದೂರದೂರ್‌ಲಿ ಇದ್ದ್, ಹಿಂದೆ ಹಿಡಿಯಮೊಂತೇಳ್ರೆ ಬೀಲ ಇಲ್ಲೆ, ಮುಂದೆ ಹಿಡಿಯನೋ ತೇಳ್ರೆ ಕೊಂಬಿಲ್ಲದ ಗೌರಜ್ಜಿನ ಮಾತ್ ಕೇಳ್ದ ಆನಂದಣ್ಣಂಗೆ ಹೊಟ್ಟೆಲಿ ಸಣ್ಣ ಮೆಣ್ಸ್ ಚಿರ್‌ಂಬಿ ಹಾಕಿದಂತಾ ಸಂಕಟ ಆತ್. ಅಂತೂ ಗೌರಜ್ಜಿಗೆ ಸಮಾದಾನ ಹೇಳಿ, "ನೀವು ಹೆದ್ರ್‌ಬಡಿ ಉಗ್ಗಂವ. ನಾ ಹನೀಸ್ ಮತ್ತೆ ಬಂದ್ ಮಾತಾಡ್ನೆ. ಹಾಂಗೆನೇ ಪಂಚಾಯ್ತಿನವ್ಕೆ ಒಂದು ಪುಕಾರ್ ಕೊಟ್ಟ್ ಅವರ್‍ೂ ಬಾಕೆ ಹೇಳ್ನೆ. ಏನಾರ್ ಒಳ್ಳ ರೀತಿಲಿ ತೀರ್ಮಾನ ಮಾಡಮೊ. ಹೆದ್ರ್ ಬಡಿ ತೇಳಿ ಅಜ್ಜಿನ ಕಳ್ಸಿದೊ.

ಪಾಪದ ಅಜ್ಜಿ ಒಂದು ಗುಡ್ಡೆ ಇಳ್ದ್, ಒಂದು ಗುಡ್ಡೆ ಹತ್ತಿ ದೊಣ್ಣೆ ಊರಿಕಂಡ್ ಕಣ್ಣ್‌ನೀರ್ ಚೀಂಟಿಕಂಡ್...."ಛೇ ಆ ಮಕ್ಕಳಿಗೆ ನನ್ನ ಮಕ್ಕಳೊಟ್ಟಿಗೆ ಒಂದೇ ಬಟ್ಲ್‌ಲಿ ಹಾಕಿ ಉರ್ಗಿ, ಉರ್ಗಿ ಊಡ್ಸಿ, ಇಂದ್ ರೆಂಕೆ ಅಡಿಲಿ ತೊಪ್ಪುಳು ಹುಟ್ಟುಕನ ಎದೆ ಮೆಟ್ಟಿಕಂಡ್ ಕಡ್ಪತ್ತಿ ಬೇರಿಕಂಡ್ ಬಂದವೆಲ್ಲಾ... ಸಣ್ಣಿತರ್ಲಿ ನನ್ನ ಮನೆಲೇ ನಿಗರಿಕಂಡ್ ಇರ್ತಿದ್ದೊ. ಮನೆಲಿ ಏನಾರ್ ಮಾಸದ ಗೈಪು ಮಿನಿ ಮಾಡ್ರೆ ನನ್ನ ಮಕ್ಕಳಾಂಗೇ ಅವ್ಕೆ ಪಾಲ್ ಇಸಿ ಕೊಡ್ತಿದ್ದೆ. ಆದರೆ ಇಂದ್ ನನ್ನ ಎರ್ಡೂ ಮಕ್ಕಳೂ ಇಲ್ಲಿಲ್ಲದ ಹೊತ್ತಲ್ಲದ ಹೊತ್ತುಲಿ ಅವು ಇಂಥಾ ಅನಾಚಾರ ಮಾಡುವೇಂತ ಗೊತ್ತಿತ್ಲೆ. ಇರ್ಲಿ ಅವ್ಕೆ ದೇವ್ರು ಕೊಡುವೊ ನೋಡಮೊಂತಾ.. ಮನ್ಸ್‌ಲೇ ನೆನ್ಸಿಕಂಡ್ ಅಜ್ಜಿ ನಡ್ಕಂಡ್ ಬಾಕನ ಕಜೆಮನೆ ಒಡ್ಕದ ಹೈದನೂ.. ಕೆಲ್ಸದವು ಕಮ್ಮುನ ತಟ್ಟೆ ಕೀಸಿ, ನೂಲು ಹೊಡ್ದ್ ಗುಂಡಿ ತೆಗೆಕೆ ಸುರುಮಾಡಿದ್ದೊ. ಗೌರಜ್ಜಿ ಮರ್ಟ್‌ಕಂಡೇ ಹೇಳ್ತ್, "ನೋಡು ಮಂಜಾ; ಗುಡ್ಡೆಂದ ಗುಡ್ಡೆಗೆ ಅಡ್ಡ ಉಟ್ಟು. ಮರಂದ ಮರ ದೊಡ್ಡದ್. ನೋಡು ಇಷ್ಟ್ ಕಾಲ ನಿನ್ನ ಅಪ್ಪ, ಅಯ್ಯೆ, ನಾವೆಲ್ಲ ಒಂದೇ ಮನೆವರಾಂಗೆ ಒಂದೇ ಬಟ್ಲ್‌ಲಿ ತಿಂದ್‌ಕಂಡ್ ಉಂಡ್‌ಕಂಡ್ ಇದ್ದೊವು. ನಾವ್ಗೆ ಸತ್ತರೆ ಹುಟ್ಟಿರೆ ಸೂತ್‌ಗ ಉಟ್ಟು, ಒಂದೇ ಕುಟುಂಬದವು, ಒಂದೇ ದೆವ್ವ ದೇವ್ರ್‌ಗೆ ಅಚ್ಚಿಲ್-ಪಚ್ಚಿಲ್ ಕೊಟ್ಟ್ ಕೊಂಡಾಡವು. ನಿಂಗೆ ಕೈ ಮುಗ್ಧನೆ. ಇಂಥ ಅನಾಚಾರದ ಕೆಲ್ಸಕ್ಕೆ ಕೈ ಹಾಕ್‌ಬಡ. ನಾ ಈ ಮೊಣ್ಣಿಗೆ ಕಾಲ್ ಇಸಿದಂದ್‌ರ್ದ ಇತ್ತ ಇದೇ ನೀರ್‌ನ ತೀರ್ಥ ಅಂತ ತಿಳ್ಕಂಡ್ ಕುಡ್ದ್ ಬೊದ್ಕಿದಂವ. ನೋಡು ಈ ಅಂಗೈ ಅಗಲ ನೀರ್ ಗುಂಡಿನ ಜಾಗೆಲಿ, ಸತ್ತ್ ಹೊತ್ತ್‌ಸಿಕೆ ಕಾಟಕೆ ಮೂರು ಸುತ್ತು ಬಾಕೆ ಜಾಗೆ ಇಲ್ಲೆ. ಅಂಥದರ್ಲಿ ನೀ... ಹೀಂಗೆ ಮಾಡ್ರೆ ಹೇಂಗೆ ಹೇಳ್."

ಗೌರಜ್ಜಿನ ಒಡಲ್ ಬೇನೆನ ಮಾತ್ ಒಡ್ಕದ ಹೈದಂಗೆ ತಮಾಷೆ ಆಗಿ ಕಂಡತ್. ಅಂವ ಅಂವನ ಕೆಲ್ಸನ ನಿಲ್ಸಿತ್ಲೆ. ಎಷ್ಟಾದರೂ ದೇಶ ಸುತ್ತಿ ಬಂದಂವ. ನಾ ಹಿಡ್ದ ಮೊಲಕ್ಕೆ ಮೂರೇ ಕಾಲ್‌ಂತ ವಾದ ಮಾಡಂವ. ಡೆಲ್ಲಿಲಿ ಬೆಂಗ್ಳೂರುಲಿ ಸೆಂಟ್ಸ್‌ಗೆ ಇಷ್ಟ್ ಕ್ರಯ

ಆದೇಂತ ಕವುಡೆ ಲೆಕ್ಕ ಹಾಕಂವ. ಆ ಚಣಲಿ ಅವಂಗೆ ಯಾರ ಬುದ್ಧಿ ಮಾತೂ ಬೇಕಾಗಿಲ್ಲೆ. ಅಪ್ಪೋತ್ತಿಗೆ ಆನಂದಣ್ಣನೂ ಅವರೊಟ್ಟಿಗೆ ಊರ್‍ನ ಪಂಚಾಯ್ತಿನವೂ ಬಂದೊ. ಅವು ಕೂಡಾ ಕುಡಿವ ನೀರ್‌ಗೆ ಅಡ್ಡಿಮಾಡ್ದು ತೊಪ್ಪೂಂತ ತರತರಲಿ ತಿಳುವಳಿಕೆ ಹೇಳಿ ಬುದ್ಧಿವಾದ ಹೇಳಿ ನೋಡ್ದೊ. ಆದರೆ ಅಂವ ಕೇಳಿಕೆ ತಯಾರಿಲ್ಲೆ.

"ಆ ಅಜ್ಜಿಗೆ ಬೇಕರೆ ನೀವು ನಿಮ್ಮ ಜಾಗೆಲಿ ಬಾಮಿ ತೆಗ್ಸಿ ಬಾಯಿಗೆ ನೀರ್ ಕೊಡಿಯ, ನಾ ಬುಡಿಕಿಲೆ. ನೋಡು ಆನಂದ ಈ ವಿಚಾರಲಿ ನೀ ಈ ಅಜ್ಜಿನ ಪರಲಿ ಆಗಿ ಮಾತಾಡಿಕೆ ಬರ್ಬಡ. You... Shuttup ಅಟ್ಟೇ..!"

ಪುಸ್ತಕ ಓದಿ ದೇಶ ತಿರ್ಗಿ ಬಂದವನ ಚಿಲ್ಲರೆ ಇಂಗ್ಲೀಷ್‌ಗೆ ಆನಂದಣ್ಣನೂ, ಅವರೊಟ್ಟಿಗೆ ಬಂದೊವೂ ಸುಮ್ಮನಾದೊ. ಇಂಥವನೊಟ್ಟಿಗೆ ಮಾತಾಡ್ರೆ ನಮ್ಮ ಮೊರ್ಯಾದಿನೂ ಹೋದು ತೇಳುವ ಅಭಿಪ್ರಾಯಲಿ ಅವು ಸುಮ್ಮನಾದೊ. ಆನಂದಣ್ಣ ಆಲೋಚನೆ ಮಾಡಿ ಒಂದು ತೀರ್ಮಾನಕ್ಕೆ ಬಂದೊ. ಹಂಗಾರೆ ಈ ಊರ್ಗೆ ಇದುವರೆಗೂ... ಕೇಸ್, ಕೊಟಂತೇಳಿ ಪೋಲೀಸ್‌ಗ ಕಾಲಿಸಿತ್ಲೆ. ಈಗ ಅವರ ಕರಿಯದೆ ಬೇರೆ ವಿಧಿ ಇಲ್ಲೆ.

"ನಂಗೆ ಹುಟ್ಟು ಒಂದು ಕಳ್ದುಟ್ಟು ಮಂಜಾ. ಇನ್ನ್ ಸಾವು ಒಂದೇ ಬಾಕಿ ಒಳದ್ ಅದ್ ಇಂದೇ ಆಗಿ ಹೋಗಲಿ. ಒಂದಾ ನಾ ಸಾಯೆಕು. ಇಲ್ಲರೆ ನೀರ್ ಗುಂಡಿ ಮುಚ್ಚಿರೆ ಅವಂಗೆ ನಾ ಕಡ್ದನೆ. ಏನಾರ್ ಒಂದ್ ಆಗೇ ತೀರೊಕು." ತೇಳುವ ಗೌರಜ್ಜಿನ ಮಾತ್‌ಗಳ ಕೇಳಿನೂ, ಪೋಲೀಸ್‌ನವರ ಕರಿಯದೇ ಇದ್ದರೆ ಯಾರಾರ್ ಒಬ್ಬ ಕಡ್ಕಂಡ್ ಹೊಡ್ಕಂಡ್ ಸತ್ತವೆ. ಹಾಂಗಾಗಿ ತಿಳ್ಸದು ಒಳ್ಳೆದ್‌ಂತ ನೆನ್ಸಿ ರೈಟ್ರ್‌ಗೆ ಫೋನ್ ಮಾಡಿ ಬಾಕೆ ಹೇಳ್ದೊ.

ಅಟ್ಟೊತ್ತಿಗೆ ಈ ನೀರ್‌ನ ಚಿಲ್ಲರೆ ಜಗಳ ಇಡಿ ಊರ್‌ಗೇ ಕೇಳಿ ಊರ್‌ಗೆ ಊರೇ ಬಾತ್. ಬಂದ್ ನೋಡ್ರೇ... ಗೌರಜ್ಜಿ ಕತ್ತಿ ಬೇರಿ ಹಿಡ್ಕಂಡ್ ನೀರ್ ಗುಂಡಿಲಿ ನಿತ್ತಳೊ. ಲಡಾಯಿ ನಡಿಯುತಾ ಉಟ್ಟು. ಒಡ್ಕದ ಹೈದಂಗೆ ಅಜ್ಜಿನ ಮೈಗೆ ಕೈ ಹಾಕಿಕೆ ದೈರ್ಯ ಬಾತಾ ಇಲ್ಲೆ. ಈ ಜಗಳ ನಡೆತಿರ್ಕನನೇ ರೈಟ್ರೂ, ಪೋಲಿಸೂ... ಇಬ್ಬೊರು ಬಂದೊ. ಇಬ್ಬರೂ ವಿಚಾರ್ಸಿದೊ. "ಕೋರ್ಟುಲಿ ತೀರ್ಮಾನ ಆಗಲಿ, ನೀರ್ ಗುಂಡಿ ಮುಚ್ಚುಬಡಿ" ಅಂತ ಹೈದಂಗೆ ಸಿಕ್ಕಾಪಟ್ಟೆ ಬುದ್ಧಿಮಾತ್ ಹೇಳ್ದೊ. ಅವಂಗೆ ಕೇಳಿಕೆ ಪುರುಸೊತ್ತು, ತಾಳ್ಮೆ ಇಲ್ಲೆ. ಅವಂಗೂ ಗೊತ್ತಾಗುಟ್ಟು ನಾ ಮಾಡ್ದ್ ತಪ್ಪೂಂತ; ಆದರೆ ಅಷ್ಟ್ ಜನರ ಎದ್‌ರ ಅದರ ಒಪ್ಪಿಕಂಬಕೆ ತಯಾರಿತ್ಲೆ. ತಪ್ಪುನ ತಪ್ಪೂಂತ ಒಪ್ಪಿಕಣದಿದ್ದರೆ ಸರಿ ಆದಾದರೂ ಹೇಂಗೆ ಹೇಳಿ? ಇರ್ಲಿ; ಒಡ್ಕದ ಹೈದ ದಾರಿಗೆ ಬಾಂವ ಅಂದಾಜಿಲ್ಲೆ. ಲಡಾಯಿ ಜೋರಾತ್. ಜನಂಗಳ ಬಾಯಿಂದ ಮಾತ್ ಹೊರ್ಡದೆ ಜನ ಬ್ಬೆಬ್ಬೆಬ್ಬೆ.. ಆದೊ. ರೈಟ್ರ್ ನಿಧಾನಕ್ಕೆ ಬೆಂಕಿಪೆಟ್ಟಿಗೆ

ಹಿರ್ದ್ ಸಿಗರೇಟ್ ಹೊತ್ತ್‌ಸಿದೊ. ಆನಂದಣ್ಣ ಮೋರೆ ಚಪ್ಪೆ ಮಾಡಿಕಂಡ್ ಚುರ್ಕನ ಕುದ್ದೊ.

ಇಷ್ಟೆಲ್ಲಾ ಲಡಾಯಿ-ಆರ್‌ಬಾಯಿ ಕೇಳ್ದ; ದಿನೋಳು ಹೊತ್ತು ಹೊತ್ತಿಗೆ ಗಂಜಿ ಹಾಕ್‌ತಿದ್ದ ಯಜಮಾಂತಿ ಗೌರಜ್ಜಿ ಬೊಳ್ಪುಂದಳೇ ಕಾಣದರ್ದ ಪಾಂಗ್ ಕೊಟ್ಟ್-ಕೊಟ್ಟ್ ಕಂಗಾಲಾದ ಅಜ್ಜಿನ ಸಾಂಕ್ ನಾಯಿ 'ಬೊಳ್ಳು' ಸಂಕಲೆ ತುಂಡುಮಾಡಿ ಮೂಕಳ್ಮೆ ನಾತ ಹಿಡ್ದ್ ನೀರ್‌ಗುಂಡಿನಕ್ಕಲೆ ಹಾರಿ ಬಂದ್ ಗೌರಜ್ಜಿ ನಿತ್ತ ಜಾಗೆಗೆ ಬಂದ್ ಗುರ್ರ್ ಗುರ್ರ್ ಮುರುಗುಟ್ಟಿ ಹಲ್ಲ್ ಚೆರ್ದ್‌ಕುದ್ದತ್...!

ಒಡ್ಡದ ಹೈದಂಗೆ ಒಟ್ರಾಸಿ ಗುಂಡಿ ಮುಚ್ಚಿ ದೈನೆಡೊಕು ತೇಳಿ, ಗೌರಜ್ಜಿನ ಬಲ್ತ್‌ಕಾರಲಿ ಎಳ್ದ್ ನೂಕಿ ಹಾಕಿಕೆ ನೋಡ್ದ ಹೈದನ ಕಂಡ ಬೊಳ್ಳು ನಾಯಿ ತನ್ನ ಯಜಮಾಂತಿಗೆ ಇಂವ ಏನೋ ಇಕ್ಕಡಿ ಮೊಡ್ಗಿದೆಂತೇಳಿ... ಒಂದೇ ಸರ್ತಿಗೆ ಬೊಗ್‌ಳಿ ಅವನ ಎದೆಗೆ ಹಾರಿ ಗಂಟ್ಲ್‌ಗೆ ಬಾಯಿ ಹಾಕಿತ್. ಹದ್ಕಿ ಬಿದ್ದ ಹೈದ ಒಂದು ಕೊದೆ ಹಿಂದೆ ಹಾರಿ ಕೈಲಿದ್ದ ಕಡ್ಪತ್ತಿ ಬೀಸಿದರ್ಲಿ ಬೊಳ್ಳು ನಾಯಿನ ನಾಳಿ ಅರ್ದ ಸಿಗ್‌ಳಿ ಹೋತು. ಪಾಪದ ನಾಯಿ ಕುಂಯ್ ಕುಂಯ್ ಸೊರ ಹೊರ್ಡ್‌ಸಿ ಗೌರಜ್ಜಿನ ಕಾಲ್ ಬುಡಕೆ ಬಂದ್ ಬೀತ್.

ಹೆತ್ತ್ ಹೊತ್ತ ಸಾಂಕಿ ಹೊರೆಗೆ ಗೆಯ್ಮೆಗೆ ಹೋದ ಮಕ್ಕಳ್‌ಂದಲೂ ಜಾಸ್ತಿ ಕೊಂಡಾಟಲಿ ಪೊಂತಿದ ಬೊಳ್ಳುನಾಯಿನ ಅವಸ್ಥೆ ಕಂಡ್ ಅಜ್ಜಿನ ಗೋಳ್ ನೋಡಿಕೆ ಬೊತ್ತದಾಂಗೆ ಆತ್. "ರೈಟ್ರೊ ಸಾರೂ ಸಾರೂ.. ಅಂವ ನೀರ್ ಗುಂಡಿ ಮುಚ್ಚಿ ನೆಗ್ದ್ ಬೀಳಲಿ. ನಾ ಉಪಾಸ ಇದ್ದನೆ. ನನ್ನ ನಾಯಿನ ಬೊದ್ಕ್‌ಸಿಕೊಡಿಕೆ ಹೇಳಿ ಸಾರೂ... ಈ ಮಕ್ಕಳಿಗೆ ಹುಟ್ಟಿದಲ್ಲಿಂದ ನಿನ್ನೆ ಮೊನ್ನೆವರೆಗೂ ನಾ ಉರ್ಗಿ ಉರ್ಗಿ ಉಗ್ಗು ಊಡ್ಯ್‌ಳೆ. ಸಾಂಕಿ ಕೈನೀರ್ ಕೊಟ್ಟಳೆ. ಆದರೆ ಇಂದ್ ಇವು ಅದರೆಲ್ಲಾ ಮರ್ತ್ ನಂಗೆ ಮೆಟ್ಟಿಕೆ ಬಂದಳೊ. ಆದರೆ ಕಳ್ದ ಎರ್ಡೇ ಎರ್ಡ್ ವರ್ಷಂದ, ನಾ ತಿಂದ್ ಬುಟ್ಟ ಮಡೆಗಂಜಿ ತಿಂದ್ ಬೊದ್ಕಿದ ಈ ನಾಯಿ ಇಂದ್ ನನ್ನ ಕಷ್ಟಕ್ಕೆ ಬಾತ್. ಸಾರೂ... ಅಂವನ ಜಾಗೆ, ಅವನ ನೀರ್, ಅವನ ಮದ, ಅವನ ಹಾಂಕಾರ ಎಲ್ಲಾ ಅವಂಗೇ ಇರ್ಲಿ; ಎಲ್ಲ ಅವ ತಕಂಡ್ ಹೋಗಲಿ. ನಂಗೆ ನನ್ನ ನಾಯಿನ ಕೊಡ್ಸಿ ಮಂಜಾ.. ಅಷ್ಟೇ ಸಾಕ್ ಬೇರೆ ಏನೂ ಬೇಡಾ.. ಬೇರೆ ಏನೂ ಬೇಡಾ... ತೇಳುವ ಗೌರಜ್ಜಿನ ಎದೆಬಾದೆನ ಗೋಳುನ ಮಾತ್‌ಗ ಎಂತವರ ಕಲ್ಲ್ ಎದೆನ ಕೂಡಾ ಕರ್ಗ್‌ಸಿ ಕಣ್ಣೀರ್ ತರ್ಸುದು. ಸೇರ್ದ ಜನಂಗಳಿಗೆಲ್ಲ ಗೊತ್ತುಟ್ಟು... ಮೊನ್ಷತ್ವ ಇಲ್ಲದ ಒಡ್ಡದ ಹೈದ ತಪ್ಪು ಮಾಡಿಟ್ಟೊಂತ... ಆದರೆ ಹೇಳಿಕೆ ಯಾರಿಗೂ ಶಕ್ತಿ ಇಲ್ಲೆ. ಜನಂಗ ಒಬ್ಬೊಬ್ಬನೇ ತಲೆ ಅಡಿಗೆ ಹಾಕಿ ಹೊರ್ಟುಹೋದೊ. ಆನಂದಣ್ಣ ನಿದಾನಕ್ಕೆ ಬಂದ್ ಅಜ್ಜಿನ

ಕೈ ಹಿಡ್ದೊ. ಪೋಲಿಸ್ ರೈಟ್ರ ಬೈಕ್ ಹೋವ ಸದ್ದ್ ದೂರಲಿ ಕೇಳ್ತ್.

ಮೂರು ಹೊತ್ತು ಗಂಜಿ, ತೆಳಿ ಹಾಕಿ ಸಾಂಕಿದ ಯಜಮಾಂತಿಗಾದ ಅನ್ಯಾಯನ ತಡೆಕೆ ಬಂದ ಬೊಳ್ಳು ನಾಯಿನ ಎದೆಲಿದ್ದ ದೈರದ ರಕ್ತ ನೀರ್ ಗುಂಡಿನ ಕೆಂಪು ಮಾಡ್ತ್....! ಅದರೊಟ್ಟಿಗೆ ನ್ಯಾಯ ಕೇಳಿಕೆ ಬಂದ ಗೌರಜ್ಜಿನ ಕಣ್ಣ್‌ನೀರೂ...!!

***

# ಗುಬ್ಬಿ ಗೂಡೆ

ಹೌದು...! ಬೊದ್ಕು ನಾವು ನೆನ್ಸಿಕಂಡಾಂಗೆ ನಡಿದುಲೆ. ಕೆಲೊವು ನಡ್ದರೂ ನಡಿಯಕೆ ಬುಡ್ದುಲೆ...! ಏನಾರ್ ಕೊಕ್ಕೆ ಹಾಕುವೆ. ಅದೆಲ್ಲ ಈಗ ನಂಗೆ ಗೊತ್ತಾದೆ. ಸರ್ರಕೆ ಪ್ರಾಯ ಆಕಂಡ್ ಬಂದಾಂಗೆ ಬುದ್ಧಿಗೂ ಪ್ರಾಯ ಆದೆ...! ಸತ್ಯಕೆ ಚೂರು ಸಾಸ್ವೆ ಬೆಲೆನೂ ಇಲ್ಲೆನಾ...? ಯಾಕೇಂತ ಹೇಳ್ರೆ ನಂಗೆ ಈಗ ಏರ್‌ಯವ್ವನ, ಮೊದುವೆ ಆವ ಪ್ರಾಯನು ಕೂಡಾ...! ಎರ್ಡ್ ರೆಂಕೆನ ಬುಳ್ಗಿಕಂಡ್ ಹಾರಿ ಕನ್ಸ್ ಕಟ್ಟುವ ಕಾಲ... ಪೊರ್ಲುನ ಬೊದ್ಕುನ ಅರ್ಳುಸುವ ದಿನಂಗ. ಎಂತರ ಮಾಡ್ದು...? ನಾ ಇಸಿಕಂಡ ಆಸೆ.... ಕಟ್ಟಿದ ಕನ್ಸ್.... ಎಲ್ಲ ಹಾಳಾಗಿ ಮಸಣ ಸೇರ್ತ್. ಉಳಿಯ ಎಲ್ಲ ಗೊಳ್ಡ್ ಹೋಗಿ ಹಳ್ಳದ ಪಾಲಾತ್...!

ಹ್ಞ... ನಾ ಆಗ ಸಣ್ಣಂವ... ಹರ್ಕಲ್ ಚೆಡ್ಡಿ, ಅಂಗಿ ಕೋಸಿ ಒಂದು ತಂಗೀಸ್ ಚೀಲ ಹಿಡ್ಕಂಡ್ ಮೂಕ್‌ಲಿ ನೆಗ್‌ಡಿ ಅರ್ಸಿಕಂಡ್.... ಕೇಳ್ದವರೊಟ್ಟಿಗೆ "ನಾ ಒಂದನೆ ಕಲಾಸ್‌ಂತ" ಅಯ್ಯೆ ಸಾರ್ ಅರಿಯದಾಂಗೆ ಚೌಕದಾಂಗಿದ್ದ ಸೀರ್‌ಚೆಲ್ಲ್‌ಲಿ ಕಟ್ಟಿ ಕೊಡ್ತಿದ್ದ ಬುತ್ತಿನ ಡಣ....ಡಣ ಆಡ್ಸಿಕಂಡ್... ತಾರ್ ಕಾಣದೇ ಇದ್ದ ಬೊಡ್ರಾಸ್ ಮಾರ್ಗಲಿ, ಎಕ್ಕಡ ಕಾಣದೇ ಇದ್ದ ಪಾದಗಳ ಹೆಟ್ಟಿಕಂಡ್ ಓಡ್ತಿದ್ದ ಕಾಲ ಅದ್...! ಆಗ ನಾ ಯಾಗೋಳು ಒಬ್ಬನೇ ಹೋದು. ದಾರಿ ಕರೆಲಿ ಸಿಕ್ಕುವ 'ಚೂರಿ ಬಲ್ಲೆಗ', 'ಜೊಂಪ್ಪಣ್ಣ್', 'ಮಡ್ಕೆರ ಮರಂಗ'ಗಳೊಟ್ಟಿಗೆ... ಎಡ್‌ಂಗುಳು ಸೆರೆ, ಕೆಬಿಗೆ ಹುಕ್ಕ್ ಕಚ್ಚಿ ರಕ್ತ ಹೀರಿ ರಾತ್ರೆ ನಿದ್ದೆ ಇಲ್ಲದಾಂಗೆ ಮಾಡ್ತಿದ್ದ 'ಉಳ್‌ಂಗ್'ಗಳೇ ನನ್ನ ಸಂಗತ್ತಗ...! ಬುಟ್ರೆ ಯಾರೂ ಇಲ್ಲೆ.

ಸಂಗತಿ ಹೀಂಗಿರ್ಕನ ನನ್ನ ಸೋದರ ಮಾವಂಗೆ ಎಲ್ಲಿಗೋ ದೂರದ ಊರ್‌ಗೆ ವರ್ಗ ಆವ್ಟುಂತ ಹೇಳಿ; ಆ ಊರ್ಲಿ ಹಕ್ಕಲೆ ಎಲ್ಲೂ ಸಾಲೆ ಇಲ್ಲದ ನೇವನ ಹೇಳಿ, ಅವರ ಮಗಳ ನಮ್ಮೊಲ್ಲಿಂದಳೇ ಸಾಲೆಗೆ ಹೋಕಂಡ್ ಬಂದ್‌ಕಂಡ್ ಇರ್ಲೀಂತ ತಂದ್ ಹಾಕಿದೊ. ಅದಿಯೇ – 'ಗುಬ್ಬಿಗೂಡೆ'. ಪಿರೀತಿಲಿ ಕರಿವ ಅಡ್ಡಹೆಸ್ರ್...! ಬೆಚ್ಚ ಬೆಚ್ಚ ಕಾದ ಓಡುಗೆ 'ದೋಳದ ಅಕ್ಕಿ'ನ ಹಾಕಿರೆ ಸಣಗಳ್ಗೆಲಿ ಹೊದ್ರಿ ರಟ್ಟಿದೆ ನೋಡಿ; ಅಷ್ಟ್ ಚುರ್ಕು... ಅಂಥಾ ಮಾತ್‌ಗ... ಕೊಂಡಾಟದ ಮೊಲ್ಲಿ...!! ನಂಗೂ ಅದ್ಕೂ ಹೆಚ್ಚಿ ಕಮ್ಮಿ ಒಂದೇ ಪ್ರಾಯ. ನಾ ಹನೀಸ್ ಎತ್ತರ ಇದ್ದೆ, ಅದ್ ಒಂದು ಮೊಳ ಕಮ್ಮಿ. ಅಂದ್‌ಂದ ಸುರಾತ್ ನಾವಿಬ್ಬೊರು ಒಟ್ಟಿಗೆ ಸಾಲೆಗೆ ಹೋದು; ಬಾದು; ತಿಂಬೊದು, ಕುದ್ದುದ್ರ್ಹ... ಆಟ ಆಡ್ದು ಎಲ್ಲ ಒಟ್ಟಿಗೆ...! ಬಾಯಿಗೆ ಬೆರ್ಲ್ ಹಾಕಿರೆ ಕಚ್ಚಿಕೆ ಗೊತ್ತಿಲ್ಲದ ಹಳ್ಳಿ ಮಕ್ಕ ನಾವು. ಆಗಳೇ ನನ್ನ ಅಪ್ಪನೂ, ಅವ್ವನೂ ಮಾತಾಟ್‌ಕಂಕೆ ಸುರುಮಾಡ್ದೊ. "ಮಂಜಂಗೆ ಹೆಣ್ಣ್ ಹುಡ್ಕುವ ಕೆಲ್ಸ ಇಲ್ಲೆ. ಹೇಂಗೂ ಸೊಸೆ ಇಲ್ಲೇ ಉಟ್ಟು." ನಾವಿಬ್ಬೊರು ಒಟ್ಟಿಗೆ ಬಂದರೆ ಸಾಕ್ "ಓ... ಮಂಜನೂ; ಸೊಸೆನೂ

ಸಾಲೆ ಬುಟ್ಟ್ ಬಂದೊನೆ...ಕುಡೆಕೆ ಕೊಡು ಅವ್ವೆ... ಗಂಜಿ ಕೊಡು ಅವ್ವೆ" ಅಂತ ಅಪ್ಪ ಹೇಳ್ತಿದ್ದೊ. ಸಾಲೆಲಿ ಕೊಡುವ ಹಸಿ ಸಜ್ಜಿಗೆ ಹೊಡಿನ ತಿಂದ್ ಕೀಜಿನ ಗಲಾಸ್‌ಲಿ ಹಾಲ್ ಕುಡಿವ ಮಕ್ಕಳಿಗೆ ಏನ್ ಗೊತ್ತಾದೆ ಹೇಳೀ...? ಅಪ್ಪನು ಅಯ್ಯೆನು ಹಾಂಗೆಲ್ಲ ನಮ್ಮ ಕುಸಾಲ್ ಕೊಮಟಿ ಮಾಡಿಕಾಕನ ನಾ ಓಡಿ ಹೋಗಿ ಅಟ್ಟಕ್ಕೆ ಹತ್ತ್‌ತಿದ್ದೆ. ಅದೇ ಗುಬ್ಬಿಗೂಡೆ... "ಛೀ ಸುಮ್ಮನಿರಿ ಮಾವಾಂತೇಳಿ" ಕೈಕಾಲ್ ಮಿದ್ದ್ ಬೆರೇಂತ ಮರ್ಟ್ಕಂಡ್ ಕುದ್ರ್‌ತಿತ್ತ್. ಇದರ ನೋಡಿ ದೊಡ್ಡೊವು ಕುಸಿಪಡ್ತಿದ್ದೊ.

ಹೀಂಗೆ ದಿನ ಹೋಕಂಡಿರ್ಕನ ಒಂದಿನ ಮಾವ ಮಗಳ ನೋಡಿಕಂಡ್ ಪೋಯಿಂತ ಬಂದಿದ್ದೊ. ಅವುನೂ... ನಮ್ಮ ಆಟ ನೆಗೆ ಕುಸಾಲ್ ನೋಡಿ "ಹೇಂಗೆಯಾ ಭಾವ... ಸೊಸೆ ನೀವ್ಗೆ ಆದರೆ ಅಳಿಯ ನಂಗೆ ಆದೂಂತ" ಹೇಳಿ ಜೋರ್‌ಲಿ ನೆಗಾಡ್ತಿದ್ದೊ. ಆದರೆ ನಾವ್ಗೆ ಇದ್ಯಾದರ ಕ್ಯಾರೇ ಇಲ್ಲದೆ ನಾವಾತ್ ನಮ್ಮ ಕೆಲ್ಸ ಆತ್.... ನಮ್ಮೊದೇ ಲೋಕಲಿ ಅಡುಂಗುವ ಆಟ, ಹಿಡಿವ ಆಟ, ಪಲ್ಲೆ ಆಟ, ಲಗೋರಿ, ಕಣ್ಣ್ ಮುಚ್ಚುವ ಆಟ... ಅದ್ ಉಜ್ಜಾಲೆಲಿ ಕುದ್ದರೆ... ನಾ ದೂಕ್‌ದು. ನಾ ಕುದ್ದರೆ ಅದ್ ದೂಕುದು. ನಂಟ್ರ್ ಬಾವ ಆಟ ಮನೆ ಕಟ್ಟುದು, ಒಂದು ತೆರಿಕುದೆಂಟಿನಾಂಗಿದ್ದ ಮಣೆ ತಕಂಡ್ ಅದ್ಕೆ ಅಯ್ಯೆನ ಕೀಂತಾದ ವಾಯಿಲ್ ಸೀರೆನ ಹೋಸಿ ಕೂಸುನ ಒಚ್ಚುವ ಆಟ.... ಹೀಂಗೆ ಒಂದಾ ಎರ್ಡಾ...? ಅಯ್ಯೊ ನೆನ್ಸಿರೆ ನೆಗೆನೊಟ್ಟಿಗೆ ಕಣ್‌ನೀರ್‌ನೂ ಬಂದದೆ. ಅಟ್ಟೊತ್ತಿಗೆ ನಾನೂ ಗುಬ್ಬಿ ಗೂಡೆನೂ ಒಬ್ಬಂದ್ರ್ ಒಬ್ಬ ಬುಟ್ಟ್ ಇರಿಕೆ ಆಗದಷ್ಟ್ ಹಕ್ಕಲೆ ಆಗಿದ್ದೊ.

ಕ್ಲಾಸ್‌ಂದ ಕ್ಲಾಸ್‌ಗೆ ಹೋಕಂಡ್ ಇದ್ದೊವು... ಏಳಾತ್... ಎಂಟಾತ್... ಒಂಬತ್ತ್... ಆಗಿ ಹತ್ತಕ್ಕೆ ಬಂದ್ ನಿತ್ತೊ. ಇಟ್ಟೊತ್ತಿಗೆ ನಾವ್ಗೆ ಚೂರ್ ಚೂರ್ ಲೋಕದ ಜ್ಞಾನ ಅರ್ಥ ಆಕಂಡ್ ಬಂದಿತ್ತ್. ಮುಂದೆನ ಹಳೇ ಆಟ ಎಲ್ಲ ಈಗಿಲ್ಲೆ. ಆದರೂ ಒಂದು ಒಳ್ಳ ರೀತಿನ ಪವಿತ್ರ ಸಂಬಂಧ ಯಾಗ ಹದಿಮೂರು ಕಳ್ದ್ ಹದ್ನಾಕ್ ವರ್ಷ ದಾಟಿಕೆ ಆತೋ... ಆಗಳೇ ಏನೋ... ಎಲ್ಲಾ... ಪೊರ್ಲು. ಫಲಗಾಳಿ ಬೀಸಿ ಹೂ ಹೋಗಿ ಫಲಬುಡುವ ಕಾಲ... ಆಗಳೇ ಪ್ರೀತಿ ಪ್ರೇಮ, ಆಕರ್ಷಣೆಂತ ಹುಟ್ಟುದುಗಡ...! ಜೀವಕ್ಕೊಂದು ಸಂಗತ್ತ ಬೇಕೂಂತ ಅನ್ಸುದುಗಡ. ಆ ಪ್ರೀತಿ ಹೇಂಗೆ ಹುಟ್ಟಿದೇಂತ ಆ 'ಭಗವತಿ'ಗೇ ಗೊತ್ತು...! ಕಂಡದೆಲ್ಲಾ ಪೊರ್ಲು. ನೋಡ್ದೆಲ್ಲಾ ಲ್ಯಾಕ್... ಹತ್ತನೇ ಕಲಾಸ್ ಮುಗೆಕೆ ಆತ್... ಗುಬ್ಬಿ ಓದಿಕೆ ಭಾರೀ ಚುರ್ಕ್. ನಂಗೆ ಹನೀಸ್ ಲೆಕ್ಕ ತಲೆಗತ್ತುಲ್ಲೆ. ಅಂತೂ ಕಡೆಗಾಕನ ಆ ಹಾಳಾದ ಲೆಕ್ಕಂದಾಗಿನೇ.... ನಾ ಅಲ್ಲೇ ಬಾಕಿ ಆದೆ. ಮೂರ್ಮೂರು ಸರ್ತಿ ಕಟ್ಟಿರೂ... ಮೂವತ್ತ್ ದಾಟತ್ಲೆ...! ಗುಬ್ಬಿಗೂಡೆ ಫಸ್ಟ್‌ಕಲಾಸ್‌ಲಿ ಪಾಸಾತ್. ಥೂ ಆ ಸುಡ್ಗಾಡ್ ಸೌದೆಕೊಳ್ಳಿ ಲೆಕ್ಕಂದಾಗಿನೇ ಏನೋ... ಇಲ್ಲರೆ ಇಂದ್ ಕೂಡಾ ನನ್ನ ಗುಬ್ಬಿ ಹಕ್ಕಿ ನನ್ನ ಒಟ್ಟಿಗೆ ಇರ್ತಿತ್ತೇನೋ...?!

"ಸೊಸೆ ಪಾಸಾತ್..... ನಿಂದ್ ಬಾಕಿ ಆತ...? ತಕ್ಕಾ ನೊಂಞ, ನೇಗ್ಲ್, ಕೊಟ್ಟು ಪಿಕಾಸೀಂತ ಅಪ್ಪ ನನ್ನ ಹೆಗ್ಲ್‌ಗೆ ಹೊರ್ಸಿದೊ. "ಸಾಲೆಗೆ ಹೋನೆ ಅಪ್ಪಾಂತ" ಮರ್ರ್ಸರೂ...., "ಅದ್ಕೆ ಪಾಠ ಮಾಡ್ದಾಂಗೆ ತಾನೆ ನಿಂಗೂ ಮಾಡ್ದ್ ನಿಂಗೇನ್ ಬಾತ್ ದಾಡೀಂತ" ಅಪ್ಪ ಹೂಡುವ ಕೋಲು ತೆಗ್ದರೆ ಅವ್ವ ಏನೂ ಮಾತಾಡಿಕೆ ದೈರ ಮಾಡ್ತ್‌ಲೆ.

ಇಷ್ಟೊತ್ತಿಗೆ ಏನ್ ಸುಡ್ಗಾಡ್ ಕರ್ಮನೋ ಏನೋ..? ಅವ್ವ ಹೇಳ್ತ್, "ನೋಡು ಮಂಜ ನೀ ಇನ್ನ್ ಅದರೊಟ್ಟಿಗೆ ಆಟ ಆಡ್ದು, ಕೊಣಿದು ಬೀಳ್ದು ಎಲ್ಲ ಕಮ್ಮಿ ಮಾಡೊಕು. ಅದ್ ದೊಡ್ಡದ್ ಆಗುಟ್ಟೂಂತ" ಹೇಳ್ತ್. "ಅದ್ ದೊಡ್ಡದ್ ಆದರೆ ಏನಾತ್...? ನಾನೂ ಆಗಳೆ...!"

"ನೋಡು ಹಠ ಮಾಡ್ಬಡ... ನಿಂಗೆಲ್ಲ ಅದ್ ಗೊತ್ತಾದುಲೆ...! ಹೇಳ್ದಷ್ಟ್ ಕೇಳ್" ಅಂತ ಅವ್ವ ನನ್ನ ಹೆರ್ದ್ರ್‌ಸಿತ್. ಹೀಂಗಾದರೂ ನಮ್ಮ ಹಳೇ ಆಟ ಹನೀಸ್ ದಿನ ಇತ್ತ್. ಆಗಳೇ ನಮ್ಮ ಇಬ್ಬರ ಮನ್ಸ್‌ಲಿ ಪ್ರೀತಿತೇಳುವಂತದ್ ಮೊಂಗೆ ಒಡ್ದ್ ನಿತ್ತಿತ್. ಇದ್ಕೆ ದೊಡ್ಡವರ ಸಾಕಾರನೂ ಇತ್ತ್. ಅದರ ಬೇರೆ ಹೇಳೊಕುತಿಲ್ಲೆ. ಕಣ್ಣ್‌ಲೇ ಮಾತಾಡ್ದು, ಸುಮ್ಮನೇ ನೆಗಾಡ್ದು, ಬಾಯಿಗೆ ಬಂದಾಂಗೆ ಪದ್ಯ ಹೇಳ್ದು, ಪಾರೆ ಕಲ್ಲ್‌ಲಿ ಹೆಸ್ರ್‌ನ ಕೆತ್ತಿ ಬಣ್ಣ ಹಾಕುದು, ಹೊಲ್ವೆ ಮರದ ತೊಪ್ಪೆ ಕೀಸಿ ಇಬ್ಬರ ಹೆಸ್ರ್ ಬರ್ದಿಸುದು... ಯಾವ ಕವಿಗಳಿಗೂ ಕಮ್ಮಿ ಇಲ್ಲದಾಂಗೆ ಪಿರೀತಿ ಪ್ರೇಮನ ವರ್ಣನೆ ಮಾಡ್ದು.... ಎಲ್ಲಾ ಮಾಡ್ತಿದ್ದೊ.

ಹಂಞ ಸಮಯ ಕಳೆಕನ ಮಾವ ಬಂದ್ ಹೇಳ್ದೊ; "ಗುಬ್ಬಿನ ಕಾಲೇಜಿಗೆ ಸೇರ್ಸೋಕು. ಹಾಂಗಾಗಿ ಇಲ್ಲಿಂದ ಕರ್ಕಂಡ್ ಹೋನೆ." ನಂಗೆ ಆಕಾಶನೇ ತಲೆಮೇಲೆ ಬಿದ್ದಾಂಗೆ ಆತ್. ಅದ್ದೂ ಅಷ್ಟೇ..! ಹುಟ್ಟಿದಲ್ಲಿಂದ ಇಲ್ಲಿವರೆಗೆ ಒಬ್ಬಂರ್ದ ಒಬ್ಬ ಬುಟ್ಟ್ ಇರ್ತಿತ್ಲೆ. ಈಗ ಹೇಂಗೆ ಇರ್ದೂಂತ ನಾ ಯೋಚನೆ ಮಾಡ್ರೆ ಅದ್ ಮರ್ಡಿಕೆ ಸುರು ಮಾಡ್ತ್. ಅಂತೂ ನನ್ನ ಪ್ರೀತಿನ ಗುಬ್ಬಿ ನನ್ನ ಬುಟ್ಟ್ ಹಾರಿ ಹೋವ ದಿನ ಬಂದೇ ಬುಡ್ತ್. ಎಲ್ಲವರ ಕಣ್ಣ್‌ತೊಪ್ಪಿಸಿ ನನ್ನ ಕೈಗೊಂದು ಮುತ್ತ ಕೊಟ್ಟ್; "ಇಂದಲ್ಲ ನಾಳೆ ನಾ.... ನಿನ್ನೊಟ್ಟಿಗೆನೇ ಇದ್ದನೆ. ನೀನೂ ಅಷ್ಟೇ ನನ್ನ ಮರಿಬಡ"ತೇಳಿ, ಅವ್ವನ-ಅಪ್ಪನ ಕಾಲ್ ಹಿಡ್ಕಂಡ್ ಕಣ್‌ನೀರ್ ಹಾಕಂಡ್ ಹೋತ್. ಹೋಗಿ ಸುಮಾರ್ ದಿನ ಕಳ್ದ್ ಕಾಗದ ಹಾಕಿತ್. ನಂಗೆ ಒಂದ್ ಗಟ್ಟಿ ಚಿನ್ನ ಸಿಕ್ಕಿದಷ್ಟ್ ಕುಸಿ.! ಮತ್ತೆ ದಿನ ಹೋದಾಂಗೆ ನಾ ಯಾಗೋಳು ಮೊಂಕ್. ಎಲ್ಲಿ ಹೋಗಲಿ, ಎಲ್ಲಿ ಬರ್ಲಿ; ಮಿನಿಟ್-ಮಿನಿಟ್‌ಗೂ ನನ್ನ ಗುಬ್ಬಿದೇ ನೆಂಪು. ಗುಡ್ಡೆಗೆ ಸೊಪ್ಪುಗೆ ಹೋಕನ, ಅವ್ವನೊಟ್ಟಿಗೆ ಹುಲ್ಲಿಗೆ ಹೋಕನ, ದನ ಹೊಡ್ಕಂಡ್ ಕೂಪಿಗೆ ಹೋದರೂ ಅದರ್ದೇ ಗ್ಯಾನ.

ಹೀಂಗಿರ್ಕನ... ಒಂದಿನ ನನ್ನ ಗುಬ್ಬಿ, ಅತ್ತೆ, ಮಾವ ಎಲ್ಲೊವೂ ದೀಪಾವಳಿಗೆ

ಬಂದಿದ್ದೊ. ಎರ್ಡ್ ವರ್ಷದ ಮೇಲೆ ನಾ ಅದರ ನೋಡಿದ್ದೆ. ಅವ್ವ ಸೊಸೆಗೆ ತೇಳಿ ಬಗೆ-ಬಗೆ ತಿಂಡಿ ತಿನಸ್ಸ್ ಮಾಡಿತ್ತ್. ನನ್ನ ಗುಬ್ಬಿ ಈಗ 'ಬೆದ್‌ರ್ ಒಳೆಗೆನ ಚೆದ್‌ರಂಗಿ'ನಾಂಗೆ ಮೈ-ಕೈ ತುಂಬಿಕಂಡ್ ಪೊರ್ಲು ಪೊವ್ವ... ಇತ್ತ್..! ನಾ ಹೋದಾಂಗೆ ನನ್ನ ಕೈ ಹಿಡ್ಕಂಡ್ "ಏನ್‌ಯಾ ಕೈ ಎಷ್ಟ್ ದಡ್ಡ್‌ಕಟ್ಟಿ ಹೋಗುಟ್ಟು" ತೇಳ್ಕನ "ನನ್ನ ಎದೆನ ಒಳೆಗೆನ ಮನ್ಸ್‌ನ ಮುಟ್ಟಿ ನೋಡು ಗುಬ್ಬಿ ಎಷ್ಟ್ ಮೆತ್ತಂಗೆ ಉಟ್ಟೊಂತ" ಮೆಲ್ಲಂಗೆ ಹೇಳ್ಕನ ಪಕ-ಪಕಾಂತ ನೆಗಾಡ್ತ್. ಗುಬ್ಬಿಗಾಗಿನೇ... ಎಂದೂ ಚಾಳೆಗೆ ಹತ್ತದಂವ ಕೊಟ್ಟೆ ಚಾಳೆ ಕೊಡಿಗೆ ಹತ್ತಿ ಬೆಂಡದ ಕೀಲೆ ತೆಗ್ದ್ ಕೊಟ್ಟಿದ್ದೆ. ಅಂದ್ ನಾವಿಬ್ರೊರ್ ಎಷ್ಟೊತ್ತ್ ಮಾತಾಟ್ಟಳೋ... ಎಷ್ಟ್ ನೆಗಾಡ್ಯಳೋ... ಒಂದೂ ನೆಂಪಿಲ್ಲೆ. "ಇನ್ನೊಂದು ಸರ್ತಿ ಬಂದರೆ ನಿಂಗೆ ಹೆಣ್ಣಾಗಿ ಬಾದು...! ಅತ್ತೆ ಮಾವಂಗೆ ಸೊಸೆ ಆಗಿ ಬನ್ನೇಂತ" ಹೇಳಿ ಎರ್ಡ್ ದಿನ ಇದ್ದ್ ಟಾಟಾ ಮಾಡಿ ಹೋದ ಗುಬ್ಬಿ ಮತ್ತೆ ಕಾಂಬಕೆ ಸಿಕ್ಕಿದ್...

ಒಂದ್ ದಿನ ಮಡ್ಕೇರಿಲಿ...! ನಾ ತಾಸಿಲ್ದಾರ್ರ ಆಫೀಸಿಗೆ ಒಂದ್ ಸರ್ಟ್‌ಪಿಕೇಟ್‌ಗೇಂತ ಹೋದಂವ ಯಾಕೋ ನೋಡ್ನೆ... ಕೋಟೆ ಹಕ್ಕಲೆ ಇಬ್ರೊರ್ ಗೂಡೆಗ ಸೆಟ್ರ್ ಹಾಕಂಡ್ ಕೊಡೆ ಸೂಂಡಿಕಂಡ್ ಹೋದವೆ! ನಾ ಕಣ್ಣ್ ಚಿರ್‌ಂಬಿಕಂಡ್ ನೋಡ್ದೆ...! ಹೌದು ಅದ್ ಗುಬ್ಬಿನೆ ಸಂಸಯನೇ ಇಲ್ಲೆ...! ಕುಸಿಲಿ ಜೋರ್ ಗುಬ್ಬೀಂತ ಕರ್ದೆ. ನನ್ನ ಗುಬ್ಬಿ ತಿರ್ಗಿ ನೋಡ್ತ್. ನೋಡ್ರೆ ನಾ ಅಲ್ಲಾ...! ಅದ್ಕೆ ಸೊರ್ಗ ಸಿಕ್ಕಿದಷ್ಟ್ ಕುಷಿ ಆತ್. ಓಡಿ ಬಂದ್ ನನ್ನ ಕೈ ಹಿಡ್ಕಂಡ್ ಒಂದೇ ಉಸ್ರ್‌ಗೆ ಸೇಂಕೆಂಡ್ "ಹೇಂಗೊಳ, ಸೌಖ್ಯನಾ... ಅತ್ತೆ ಮಾವ ಉಸಾರ್ ಒಳೊನಾ...?" ಎಲ್ಲ ಕೇಳ್ತ್. ಹಾಂಗೇ ಮಾತಾಟ್‌ಕಂಡ್ ರಾಜಾಸೀಟ್ ಹಕ್ಕಲೆ ನಡ್ಕಂಡ್ ಹೋದೊ. ಅಲ್ಲೇ ಒಂದ್ ಬೈಪಣೆನಾಂಗಿದ್ದ ಕಲ್ಲ್ ಬೇಂಚಿಲಿ ಕುದ್ದ್‌ಕಂಡ್... ದೂರಲಿ ಕಾಂಬ ಗುಡ್ಡೆಗಳ ಸಾಲ್... ಕೆಳೆಗೆ ಹಸ್‌ರ್ ಗದ್ದೆ ಬೊಯ್ಲ್; ಹಾವು ಹೋದಾಂಗೆ ಕಾಂಬ ಮಂಗ್ಳೂರ್ ಕಡೆಗೆ ಹೋವ ಮಾರ್ಗ; ನಮ್ಮ ಪ್ರೀತಿನಷ್ಟೇ ಗಟ್ಟಿ ಅಷ್ಟೇ ಎತ್ತರಲಿ ಬಾನಕ್ಕೆ ಮುತ್ತ ಕೊಡುವ ಆಕಾಶವಾಣಿ ಟವರ್....! ಎಲ್ಲ ನೋಡಿಕಂಡ್ ತೊಂಪು ಗಾಳಿಗೆ ಎದೆಒಡ್ಡಿ ಕಷ್ಟ ಸುಖ ಮಾತಾಟ್‌ಕಂಡ್, ಕೋಳಿ ಕೂಂಗಿದ ಸೊರಕೇಳಿ ಅರ್ಳಿದ ಗುಲಾಬಿಗಳ ನೋಡಿ, ಹಸ್‌ರ್ ಹುಲ್ಲುನ ಮೇಲೆ ಕುದ್ದ್; ಕದ್ದ್ ನೋಡ್ವ ಮುತ್ತುನ ಮ್ಯೊಂದ್‌ನ ಹನಿಗ ನಾವಾಗಿದ್ದೊ.

ಅಂತೂ ಕಡೆಗೆ ನಾನೇ ಕೇಳ್ದೆ; "ಗುಬ್ಬಿ ಈಗ ಎಂತದ್ ಮಾಡಿಕಂಡ್ ಒಳ...?" ಅದ್ಕೆ; "ನಾ ಈಗ ಮೆಡಿಕಲ್ ಓದ್ತಾ ಒಳೆ. ಇನ್ನ್ ಒಂದ್ ವರ್ಷ ಉಟ್ಟು. ಅದ್ ಮುಗ್ದಾಂಗೆ ನಮ್ಮ ಮೊದುವೆ ಆಕಿಲೆನಾ....?" ನನ್ನ ಎದೆ ಜಲ್ಲ್‌ಂತ ಹೇಳ್ತ್. ಅದ್ ಡಾಕ್ಟರ್ ಕಲಿದು. ನಾ ಬೊಳ್ಪಾಕನ ಎದ್ದ್ ಎತ್ತ್‌ಗಳ ಕಟ್ಟಿಕಂಡ್ ಹೂಡಿಕೆ ಹೋದು. ಎಲ್ಯುಟ್ಟು...ಎಲ್ಲಿಲ್ಲೆ...ಯತ್ವಾಸ...!!

ಯಾಕೊ ನನ್ನ ಮನ್ಸ್‌ಲಿ ಒಂದ್‌ತರಾ... ಸೆಳಿ ಸೆಳಿ ಆಕಂಡ್ ಬಾತ್. "ಅಲ್ಲ ಗುಬ್ಬೀ... ನನ್ನ ನಿನ್ನ ಮೊದುವೆಗೆ ಮಾವನು ಅತ್ತೆನೂ ಒಪ್ಪುವೊನಾ....? "ಓಯ್ ಒಪ್ಪದೆ ಇದ್ದರೆ ನಾ ಒಪ್ಪುಸಿನೆ ಮಾರಾಯ, ನೀ ಏನೂ ಹೆದ್ರ್‌ಬಡ. ಅಪ್ಪನ ಒತ್ತಾಯಕ್ಕೆ ಮೆಡಿಕಲ್ಲ್ ಸೇರ್‍ದ್. ಇಲ್ಲದಿದ್ದರೆ ನಾ ಯಾಗೊಳೋ... ನಿನ್ನ ಮನೆಲಿ ಇರ್ತಿದ್ದೆ. ಆ ಹಸ್‌ರ್ ಕಾಡ್, ಹರಿವ ಕೈಸಾಲ್ ನೀರ್, ಚೆಂಡ್ ಹೂನ ಬಲ್ಲೆ... ಎಂಥಾ ಲ್ಯಾಕ. ಅದೆಲ್ಲ ಇಲ್ಲಿ ಸಿಕ್ಕಿದೆನಾ.... ಹೇಳ್? ದಿನಾ ಬೊಳ್ಪು ಕತ್ತಲೆ ಆದರೆ ದುಡ್ಡು ಲೆಕ್ಕ ಹಾಕುವ ಅಪ್ಪಂಗೆ, ಹಳ್ಳಿಲಿ ಸಿಕ್ಕುವ ನೆಮ್ಮೆದಿ, ಸುಖ, ಎಲ್ಲಿ ಅರ್ತ ಆಕು ಹೇಳ್." ತೇಳಿ ಅಲ್ಲೇ ಹಕ್ಕಲೆ ಇದ್ದ ಕೈಗಾಡಿಂದ ಚಂಬುರ್ಳಿರಿ ತಿಂದ್‌ಕಂಡ್ ಸಣ್ಣ ಮಕ್ಕಳಾಂಗೆ ಪುಟಾಣಿ ರೈಲ್‌ಲಿ ಕುದ್ದ್ ಎರ್‍ಡ್ ಸುತ್ತ ಹಾಕಿ ಅದರ ಕಳ್ಸಿ ತೂಕಲಿ ಬೇನೆ ತುಂಬಿಸಿಕಂಡ ಎದೆನ ಹೊತ್ತ್‌ಕಂಡ್ ನಾ ಬಂದೆ.

ದಿನಂಗ ಹೊಣ್ಕೆಂಡ್-ಹೊಣ್ಕೆಂಡ್ ಹೋತಾ ಇದ್ದೊ. ಅಪ್ಪ ಮಂಜಂಗೆ ಮೊದುವೆ ಮಾಡೊಕುತಾ ಅವ್ವನೊಟ್ಟಿಗೆ ಹೇಳ್ತಿದ್ದೊ. "ನೋಡು; ಕುಮಾರ ಹೈದಂಗೆ ನಾಳೆ ನಾಳ್ದ್ ತೇಳಿ ಇಪ್ಪತ್ತೈದ್-ಇಪ್ಪತ್ತಾರ್ ಆಕಂಡ್ ಬಾತ್. ಅವಂಗೆ ಗೂಡೆ ಹುಡ್ಕೊಕು, ಮೊದುವೆ ಮಾಡೊಕು. ಇದೊಂದ್ ಜಬವ್ದಾರಿ ಮುಗ್ಸಿರೆ ಮತ್ತೆ ನೆಮ್ಮೆದಿಲಿ ಕಣ್ಣ್‌ಮುಚ್ಚಕ್." "ಅಯ್ಯನಬಂಡೆ ಅವಂಗೆ ಗೂಡೆ ಹುಡ್ಕಿಕೆ ಎಂತಟ್ಟು? ಗುಬ್ಬಿ ಉಟ್ಟಲ್ಲಯಾ... ಹೇಂಗೂ ಹುಟ್ಟಿದಲ್ಲಿಂದ ಇಲ್ಲೇ ಆಡಿಕಂಡ್ ಇಬ್ರೊರು ಒಟ್ಟಿಗೆ ಬೆಳ್ದದ್." "ಎಂತರನೇ ಮಾತಾಡ್ತೂ... ಆಕಾಶಕೆ ಏಣಿ ಹಾಕಿಕೆ ಹೋದರೆ ಆದೆನಾ...? ಅವೆಲ್ಲಿ ನಾವೆಲ್ಲಿ? ಹೋಗಿ ಹೋಗಿ ಈ ಹಳ್ಳಿ ಹೈದಂಗೆ ಅವು ಹೆಣ್ಣ್ ಕೊಡುವೊನಾ ಹೇಳ್?" "ನೋಡಿ ಗೂಡೆನೂ ಹೈದನೂ ಒಪ್ಯಳೊ ಕೊಡದೆ ಏನ್? ಎಂತಕ್ಕೂ ನೀವೇ ಹೋಗಿ ಒಮ್ಮೆ ಮಾತಾಟ್‌ಕಂಡ್ ಬನ್ನಿ" ಅಂತ ಅವ್ವ ಹೇಳ್ತ್. ನಂಗೆ ಮನ್ಸ್‌ನ ಒಳಗೊಳೆಗೇ ಕುಸಿ. ಈಗಾರ್ ಮೋಡ ಕರ್ಗಿ, ಮುಗಲ್ ಹೋಗಿ ಬಾನ ಬೊಳ್ಳಡೆ ಆವ ದಿನ ಬಂದದೇಂತ ಹಾರಿ ಹಾರಿ ಸೂರೋಡಿ ತುಂಬ ಕೊಣ್ದಿದ್ದೆ.!

ಹಾಂಗೆ ಮಾತಾಟ್‌ಕಂಡ್ ಬಾಕೆ ಹೋದ ಅಪ್ಪಂಗೆ ನನ್ನ ಮಾವನೂ ಅತ್ತೆನೂ ಸೇರಿ ಸರ್‍ಯಾದ ಮೊರ್ಯಾದಿ ಮಾಡಿ ಕಳ್ಸಿದೊ. "ನೋಡಿ ಭಾವ ಇದ್ ಯಾಗೋಳು ಆಗದ ಮಾತ್. ಇರುವ ಒಂದು ಕೂಸುನ ಒಳ್ಳಕಡೆಗೆ ಕೊಡೊಕುಂತ ನಮ್ಮ ಅಭಿಪ್ರಾಯ. ಅಲ್ಲದೆ ಅದ್ ನಾಳೆ ನಾಳ್ದ್ ತೇಳಿ ಡಾಕ್ಟ್ರು ಆದೆ. ನಾವು ಅದರ ಡಾಕ್ಟ್ರ್ ಓದ್‌ಸಿದ್ ನಿಮ್ಮೊಲ್ಲಿಗೆ ಬಂದ್ ದನ ಮೇಸಿಕನಾ...? ಈ ಸಂದಾನ ಎಂದ್ಲೂ ಆಗಿ ಬಾಕಿಲೆಂತ" ಕಡ್ಡಿ ಮುರ್ದಾಂಗೆ ಹೇಳ್ದೊ ಗಡ. ಅಪ್ಪ ಎಷ್ಟ್ ದಮ್ಮಯ ಹಾಕಿರೂ ಕೇಳ್ತ್ಲೆಗಡ. "ನೋಡಿ ಸುಮ್ಮಂಗೆ ಹಠ ಮಾಡ್ಪಡಿ ನಾಯಿನ ತಕಂಡ್ ಬಂದ್ ಪಲ್ಲಕ್ಕಿಲಿ ಕುದ್ರ್‌ಸಿಕೆ ಆದೆನಾ

ಹೇಳಿ? ನಮ್ಮ ತಾವರೆ ಹೂನಾಂಗಿದ್ದ ಒಂದ್ ಕೂಸ್‌ನ ನಿಮ್ಮ ಆ ಹಾಳ್ ಗುಡ್ಡೆತಲೇಗೆ ಕೊಡಿಕಿಲೆ. ಒಂದ್ ಕೊಡ್ಪಾಣ ನೀರ್ ತರಕರೂ ಅಡಿಮ್ಮೈ ಗುಂಡಿಗೆ ಬರೊಕು. ಅದೂ ಅಲ್ಲದೆ ನಂಟ್ರೊಳೆಗೆ ಸಂಬಂಧ ಬೇಡಾಂತ" ಸರಿಲಿ ದಬಾಯ್ಸ್ಯೆಳೊ. ಪಾಪ ಗುಬ್ಬಿ ಗೂಡೆ ಮರ್ಪ್‌ಕಂಡ್ ಹೇಳ್ತ್‌ಗಡ; "ಅಪ್ಪಾ ದಮ್ಮಯ್ಯಾ... ನಂಗೆ ಮೊದ್ವೆಂತ ಇದ್ದರೆ ಅದ್ ಕುಮಾರನೊಟ್ಟಿಗೆ ಮಾತ್ರ... ನಾ ಅದಿಯೇ ಮನೆಲಿ ಗಂಜಿ ನೀರ್ ಕುಡ್ದಳೆ. ನಾ ಅದೇ ಮನೆಗೆ ಸೊಸೆ ಆಗಿ ಹೋನೇಂತ" ಹೇಳ್ಕನ ಮಾವ ಗುಬ್ಬಿನ ತಲ್ಜುಟ್ಟು ಹಿಡ್ದ್ "ಮುಚ್ಚ್‌ಬಾಯಿ ನೀ ನನ್ನ ಮಗ. ನಿನ್ನ ಅಯ್ಯೆ ನಿನ್ನ ಹೆತ್ತದ್. ನಿನ್ನ ಮೊದ್ವೆ ಯಾರೊಟ್ಟಿಗೆ ಮಾಡೊಕು ಮತ್ತೆ ಹೇಂಗೆ ಮಾಡೊಕೂಂತ ನಾವ್ಗೆ ಗೊತ್ತುಟ್ಟು. ಹೋಗಿ ಹೋಗಿ ಆ ಹಳ್ಳಿ ಗುಗ್ಗುರುನನೇ ಮೊದ್ವೆ ಆನೆತೇಳ್ರೆ ನೀ ನಿನ್ನ ಅಪ್ಪ ಅಯ್ಯೆನ ಹೆಣಿನ ನೋಡೊಕಷ್ಟೇ.... ಉಸಾರ್" ಅಂತ ಹೆದ್‌ರ್ಸಿ ನನ್ನ ಗುಬ್ಬಿನ ಮೇಲೆ ಬ್ರಹ್ಮಾಸ್ತ್ರನ ಈಡಿಸಿದ್ದೊ ನನ್ನ ಮಾವ.

ಗುಬ್ಬಿ ಅಪ್ಪನಕ್ಕಲೆ ದುಕ್ಕ್‌ಡ್ಸಿ-ದುಕ್ಕ್‌ಡ್ಸಿ ಮರ್ಪ್‌ಕಂಡ್ ಕಾಲ್ ಹಿಡ್ಕಂಡ್ ಹೇಳ್ತ್‌ಗಡ.... "ಮಾವಾ.... ನನ್ನಪ್ಪಂಗಯ್ಯೆಗೆ ಅವು ಹೇಳ್ದೇ ಆಕು.... ನಾ ಹಿಡ್ದ ಮೊಲಕ್ಕೆ ಮೂರೇ ಕಾಲ್‌ಂತ ವಾದ ಮಾಡೊವು. ನನ್ನ ತಲೆ ನೋಡಿ ಎಣ್ಣೆ ಹಾಕಿ, ಹೊಟ್ಟೆ ನೋಡಿ ಗಂಜಿ ಕೊಟ್ಟ್ ಸಾಂಕ್ಯಳರಿ ಮಾವ ನೀವು. ನನ್ನ ಮೋರೆ ನೋಡಿ ಕುಮಾರ ನನ್ನ ಕರ್ಕಂಡತ್. ಈಗ ಬೆನ್ನ್ ನೋಡಿ ಕಳ್ಸಿಕೊಡಿಕೆ ಹೇಳಿ ಬುಡಿ. ಇನ್ನೊಂದು ಜನ್ಮಾಂತ ಇದ್ದರೆ ನಿಮ್ಮ ಮನೆ ಮಗ್ಳಾಗಿ ಹುಟ್ಟಿ ರುಣನ ತೀರ್ಸಿನೆ ಮಾವಾ... ಕುಮಾರಂಗೆ ನನ್ನ ಪ್ರೀತಿನ ತಿಳ್ಸಿ, ಅತ್ತೆನ ಆಶೀರ್ವಾದನ ಬೇಡ್ದೇಂತ ಹೇಳಿ" ತೇಳಿಕಂಡ್ ಮರ್ಪತ್‌ಗಡ.

ಇಷ್ಟೆಲ್ಲ ರಂಪ-ರದ್ಧಾಂತನ ನೋಡ್ದ ನನ್ನ ಅಪ್ಪ ಮೋರೆ ಚಪ್ಪೆ ಮಾಡಿಕಂಡ್ ಮನೆಗೆ ಬಂದ್ ನಡ್ದ ಸಂಗತಿನ ಎಲ್ಲ ಹೇಳ್ದೊ. "ನಾ ಗುಬ್ಬಿನ ಮೇಲೆ ಕಟ್ಟಿದ ಕನ್ಸ್‌ನ ಗೂಡಾರ ಒಡ್ದ್ ಹೋಗಿ ಕಣ್‌ನೀರ್ ಮಾತ್ರ ಹೊರೆಗೆ ಬಾತ್. ಎದೆ ಒಳಗೆ ಊರಿಸಿದ ಪ್ರೀತಿನ ಬೊಳ್ಳಿ ನನ್ನ ಗಂಟ್ಲೆಗೆ ಉರ್ಕ್ಯಾತ್. ನಾ ಯಾರಿಗೂ ಏನೂ ಹೇಳಿಕೆ ಹೋತ್ಲೆ. ನನ್ನಷ್ಟಕ್ಕೆ ನಾನೇ ಹೇಳಿಕಂಡಿದ್ದೆ "ನೋಡು ಗುಬ್ಬಿ ನಿನ್ನ ನಾ ಪಡ್ಕಂಬ ಯೋಗ್ಯತೆ ನನ್ನ ಹಣೆಲಿ ಬರ್ತ್ಲೆ. ನೀ ಯಾಗೋಳು ಲ್ಯಾಕ್ಕಿರೊಕು. ನಾ ಸತ್ತನೆ, ಮೊದ್ದು ಕುಡ್ದನೆ ಅಂತೆಲ್ಲಾ ನೀ ಯೋಚನೆ ಮಾಡ್ಬಡ, ಸತ್ತರೆ ಸಾಧನೆ ಸೊನ್ನೆ. ನಿನ್ನ ಕಣ್ಣ್‌ಂದ ಒಂದೇ ಒಂದ್ ಹನಿನೂ ಉದ್ರಿಕೆ ಬೊತ್ತು. ದೇವ್ರು ನಿಂಗೆ ಒಳ್ಳೆ ಗಂಡನ ಕೊಟ್ಟ್ ಲ್ಯಾಕ್‌ಲಿ ಬೊದ್ಕುವ ಸುಖ-ಸಂತೋಷ ಎಲ್ಲ ಕೊಡಲಿ ಯಾಗೋಳು ನೀ ನೆಗಾಡಿಕಂಡೇ ಇರೊಕು"ತೇಳಿ ಅದರ ಪಟಕ್ಕೊಂದು ಮುತ್ತ ಕೊಟ್ಟೆ.

ಈ ಸಂಗತಿ ನಡ್ದ್ ಈಗ ಸುಮಾರ್ ವರ್ಷ ಕಳ್ದುಟ್ಟು. ಗುಬ್ಬಿನ ಅವು ಯಾವಂಗೊ

ಕಟ್ಟಿ ಕೈ ತೊಳ್ಕಂಡೊ. ಮೊದ್ವೆಕಾಗದ ಪೋಸ್ಟ್‌ಲಿ ಮನೆಗೆ ಬಂದಿತ್ತ್. ನಾವು ಯಾರೂ ಹೋತ್ಲೆ. ನಮ್ಮ ದಾರಿ ನಾವ್ಗೆ. ಅವರ ದಾರಿ ಅವ್ಕೆ...! ಗುಬ್ಬಿ ಈಗಳೂ ಡಾಕ್ಟ್ರ. ನಾ ಈಗಳೂ ನೇಗ್ಲ್, ನೊಂಜ, ಹೆಗ್ಲ್‌ಗೆ ಹಾಕ್ಕಂಡ್ ಎತ್ತ್‌ಗಳ ಹೊಡ್ಕಂಡ್ ಹೋಗಿ ಗದ್ದೆಲಿ ದನಿ ಕೊಟ್ನೆ. ಆದರೇ... ಆದರೇ... ನಾ ಸುಮ್ಮಂಗೆ ಕುದ್ದ್‌ಕಂಡಿರ್ಕನ ಹಳೇ ಹುಚ್ಚಿ ನೆಂಪುಗ ತಲೆಮೇಲೆ ಕುದ್ದ್‌ಕಂಡ್ ಪೀಡ್ಸಿಕೆ-ಕಾಡ್ಸಿಕೆ ಸುರುಮಾಡ್ವೆ, ಈ ತಲೆ ತಿಂಬ ಪ್ರಶ್ನೆಗಳಿಗೆ ಉತ್ತರನೇ ಇಲ್ಲೆನಾ...?

"ಸಣ್ಣಿತರ್‌ಂದಳೇ ಒಟ್ಟಿಗೆ ಬೆಳ್ಸಿ, ಬುದ್ಧಿಕಲ್ಸಿ, ಪಾಠ ಹೇಳಿಕೊಟ್ಟ್, ಇದಿಯೇ ನಿನ್ನ ಗೂಡೆ, ಇವನೇ ನಿನ್ನ ಹೈದಾಂತ ನಮ್ಮ ಇಬ್ಬರ ಮನ್ಸ್‌ಲೂ ಆ ಭಾವನೆನ ತುಂಬ್‌ಸಿ, ನೀವಿಬ್ಬೊರೂ ಒಟ್ಟಿಗೇ ಸಂಸಾರ ಮಾಡೊಕೂಂತ ಹೇಳಿ; ಮೊದ್ವೆ ವಯ್ಸಿಗೆ ಬಾಕನ, ಅಪ್ಪನೂ ಅಯ್ಯೆನೂ, ಅತ್ತೆನೂ-ಮಾವನೂ.... ಆಸ್ತಿ, ಬೊದ್ಕು, ದುಡ್ಡು, ದೊಡ್ಡಸ್ತಿಕೆ ಅಂತೇಳಿ ಕೊಡಿಕಿಲೆ, ಬುಡಿಕಿಲೇಂತ ಯಾಕೆ ನಾವ್ಗೆ ಎಳ್ಳ್‌ನೀರ್ ಬುಟ್ಟ್ ನಮ್ಮ ನೊಡೂಲಿ ಬೆಳ್ದ ಕಾವೇರಿ ನೀರ್ ನಷ್ಟೇ ಶುದ್ಧ ಆದ ಪ್ರೀತಿನ ಕೊಂದ್ ಯಾಕೆ ಕಾಟಕ್ಕೆ ಹೆರ್ಕಿಟ್ಟದ್..? ಯಾವ್ದೇ ಕಾಮದ ನಾತ ಇಲ್ಲದೆ ಅರ್ಳಿದ ಪೊರ್ಲುನ ಪ್ರೇಮಕ್ಕೆ ಬೆಲೆನೇ ಇಲ್ಲೆನಾ...? ಸಂಬಂಧಗ ಬೆರಿ ಸುಳ್ಳ್‌ಗಳ ಸಂತೆನಾ? ಸ್ವಾರ್ಥದ ಮುಖವಾಡನಾ....? ನಂಗಂತೂ ಉತ್ತರ ಸಿಕ್ತ್‌ಲೆ. ನೀವಾರ್ ಹುಡ್ಕಿಕೊಡಿ ಕಾಯೆತಾ ಉಟ್ಟು ಈ ಒಂಟಿ ಜಿವಾದಿ ಕರಿಕತ್ತಲೆನ ಪರ್ಪಂಚಲಿ!!

***

# ಪೂಜಾರ್ಮೆ

"ಆ" ಊರ್‍ಲಿ ಒಂದ್ ಹಬ್ಬದ ಗೌಜಿ ಗಮ್ಮೊತ್ತ್‌ನ ಕಾಣಕರೆ ನಾವೆಲ್ಲೊವೂ ಮಾಯಿತ್ತಿಂಗ ಹೋಗಿ, ಸುಗ್ಗಿ ಕಳ್ದ್, ಪೊಗ್ಗು ಹಿಡೆಕನ ಮುಟ್ಟ ಪಾರಕಾಯೆಕು. ಕಾರಣ ಊರ್‌ಕಟ್ಟ್‌ನ ವರ್ಸದ ಕಾಲ್ವಾದಿ ನೇಮ. ಶಿರಾಡಿ ಘಟ್ಟಕೊಡಿಂದ ಇಳ್ದ್ ಬೊಯ್ಲ್‌ಗೆ ಬಂದ್ ಊರ್‍ಗೆ ಕೆಂಡದ ಮಳೆ ಬಾಕನ ಕೊಡೆ ಹಿಡ್ದ್ ನಿತ್ತ್, ಊರ್‍ಗೆ ಬಂದ ಮಾರಿನ ಓಡ್ಸಿ ನಂಬಿದವ್ಕೆ ಇಂಬು ಕೊಟ್ಟ್ ಊರು ಮೊಣ್ಣ್ ಮನೆ, ಬೇಲಿ ಕೋಲ್ನ ರಕ್ಷಣೆ ಮಾಡಿ ಕಾಪಾಡ್ದ ಶಿರಾಡಿ ದೈವಕ್ಕೆ ಕೋಲದ ಗೌಜಿ. ಹತ್ತೂರ್‍ನ ಜನಂಗ, ಕೊಟ್ಟ ಹೆಣ್ಣ್‌ಗ ನಂಟ್ರ್‌ನಾಡ್ರ್‌ಗೆಲ್ಲ ಸೇರಿಕಂಡ್, ಸಂತೆಕಳಲಿ ತಿರ್‍ಗಿಕಂಡ್; ಶಿರಾಡಿಗೇಂತ ಹರ್ಕೇಳಿ ಬುಟ್ಟ ಹತ್ತಿಘೊತ್ತ್  ನಾಕ್‌ನಡೆನ ಜೇವಾದಿಗ; ಕಡ್ಡ ಜೇವಾದಿಗಳ ತಲೆಗಳಿಗಾಗಿನೇ ವಾರಕ್ಕೆ ತಿಂಗಳ್ಗೆ ಮುಂದೆನೇ ಕೋಲಕಟ್ಟುವ ಅಜಲಂಗೆ ಗುಟ್ಟುಲಿ ಇನ್ನೂರ್‌ಮುನ್ನೂರ್ ಕೊಟ್ಟ್, ಕೇಳಿಸಿಕಂಡ್; ನೂರಿನ್ನೂರ್ ಎರ್ಡ್‌ಕಾಲ್ನ ಜೇವಾದಿಗಳ ನಾಳಿನ ಕೊಯೆಕಾಗಿನೇ ದೈವದ ಚಾಕ್ರಿಮಾಡ್ವ "ಶುದ್ಧಂತ ಮಾನ್ಯರ್" ಮೊಡ್ಯಾಳ್ರ್ ಒಂದ್ ಹರ್ತದ ಬೀಸ್ಕತ್ತಿನ ಮೊಸ್ತ್ ನಾಳಿನ ಕೊಯ್ದ್-ಕೊಯ್ದ್ ಇಡ್ಕನ ಅಟ್ಟೆತ್ತರ ಹಾರಿ ಹೊಡ್ದಾಡ್ವ ಜಿವಾದಿಗಳ ತಣ್ಣಂಗಾದ ಮೇಲೆ ತಕಂಡೋಗಿ ತೆರ್ದ್ ಮುರ್ದ್ ಗೈಪು ಮಾಡಿ ಹಬ್ಬ ಮಾಡಿ ಕೊಣ್ದ್ ಕುಷಿಪಡ್ವ ಪೊರ್ಲ್‌ನ ದಿನ.

ಆದರೆ ಈ ವರ್ಸದ ಕಾಲಾವ್ದಿ ಜಾತ್ರ್‌ಗೆ ಬೇರೆನೇ ಗತ್ತ್ ಬಂದಿತ್ತ್. ಯಾಕೆಂತೇಳ್ರೆ ತಲೆ ತಲಾಂತರ್‌ಂದ ದೈವದ ಚಾಕ್ರಿನ ಒಂದ್ ಕ್ರಮನನೂ ಬುಡದೆ ಚೂರೂಽಽ ಅದಲ್ಬ್‌ದಲ್ ಮಾಡದೆ ನಡ್ಸಿಕಂಡ್ ಬಾತಿದ್ದ ಶಿರಾಡಿನ ಬಾಳ್ಬ್‌ಂಡಾರನ ಹಿಡ್ದ್ ಪೂಜರ್ಮೆ ಮಾಡಿಕಂಡ್ ಪಾಲ್ಸಿಕಂಡ್ ಬಾತಿದ್ದ ತಾಣದ ಮನೆ ಕಾರ್ಯಪ್ಪ ಗೌಡ್ರ ಕಾಲ ಕಳ್ದೋದ ಮೇಲೆ ಅವರ ಒಬ್ಬನೇ ಒಬ್ಬ ಗಂಡ್ಯೆದ ಭಂಡಾರದ ಮೂಲ ಚೌಡಿಂದ ಗಡಿಯಡಿ ಸ್ಥಾನಕ್ಕೆ ದೀಟಿಗೆಲಿ ಕೊಂಬುವಾದ್ಯದ ಸಮೇತ ತಕಂಡೋದು.! ಎಟ್ಟೋ ವರ್ಸಂದ ಅಪ್ಪನ ಅಪ್ಪನ ಕಾಲಂದಳೂ ದೈವದ ಚಾಕ್ರಿ ಮಾಡಿಕಂಡ್ ಬಾತಿದ್ದ ತಾಣದ ಮನೆನ ಹಿರೆವರೊಟ್ಟಿಗೆ ಈಗ ಕಾರ್ಯಪ್ಪನೂ ಕಾಯಬುಟ್ಟ್ ಕೈಲಾಸ ಸೇರಿ ಅವನೂ... "ದೈವ" "ದೈವತ್ವ" ಆಗಿ ಸೇರಿಹೋದ್ದ್ ಈಗ ಹಳೇ ಸಂಗತಿ. ಕಾರ್ಯಪ್ಪನ ಅಜ್ಜನ ಪೂಜರ್ಮೆ ಬಗ್ಗೆ ಜನಂಗ ಈಗಳೂ ಮಾತಾಡ್ಟ್‌ಕಂಡವೆ. ದೊಡ್ಡ ಪೂಜಾರಿ, ದೊಡ್ಡ ಪೂಜಾರೀಂತ ಕರ್ದ್, ಕರ್ದ್, ಅವರ ಮೂಲಹೆಸ್ರೇ ಮರ್ತೊವಟ್ಟರ ಮೊಟ್ಟಿಗೆ ಹೇಳಿ-ಕೇಳಿ ಹೋದ ಮೊಯಿಂಸ. ಮೂರ್‌ಮ್ಯೆಲ್ ದೂರ ಇದ್ದ ಬನಕ್ಕೆ ಒಬ್ಬನೇ ನಡಿರ್ಲ್ ನಡ್ದೋಗಿ ಅಲ್ಲಿ ಬನದವ್ವನ ನೆನ್ಸಿಕಂಡ್ "ಅವ್ವಾ... ನಿಂಗೆ ಸಮ್ಮಾನ

ಕೊಡ್ತಾಳೆ. ಕುಷಿಲಿ ಸ್ವೀಕಾರ ಮಾಡಿಕಂಡ್ ನಮ್ಮೂರ್ನ, ಮಕ್ಕಮೊರಿನ, ದನಕರ್ಗಳ ಕಾಪಾಡ್ವ ಪುಣ್ಯ ಕೀರ್ತಿ ನಿಂಗೆ ಬುಟ್ಟದ್"ತೇಳಿ ಒಂದ್ ಸೇರ್ ಹೊದ್ರಿನ ಉದ್ದಕ್ಕೆ ಹಾರ್ಸಿರೆ... ಒಂದ್ ಹೊದ್ರಿ ಅಗ್ಲೂ ಕೆಳೆಗೆ ಬೀಳ್ತಿತ್ಲೆಗಡ. ತಿರ್ಗಿ ಬಾಕನ ಅವರೊಟ್ಟಿಗೆ ಎಡ್ದಿಗೊಂದ್-ಬಲ್ದಿಗೊಂದ್ ಜಡೆತಕಂಡ್ ಹರಿವ ಜೀವಾದಿಗ ಬಂದ್ ಬುಟ್ಹೋಗಿ ಮಾಯಕಾತಿದ್ದೊಗಡ. ಇದ್ ದೊಡ್ಡ ಪೂಜಾರ್ಯಜ್ಜನ ಭಕ್ತಿ ಸೇವೆನ ಒಂದ್ ಸಣ್ಣ ಉದಾರ್ಣೆ..!

ದೊಡ್ಡ ಪೂಜಾರ್ಯಜ್ಜನ ಮಂಜನ ಮಂಜ ಅಂತೇಳ್ರೆ ಪುಳ್ಳಿ. ಕಾರ್ಯಪ್ಪನ ಸಂಸಾರಲಿ ಹೆಣ್ಣ್ ಸಂತಾನಗಳೇ ದಾಸ್ತಿ. ಆದನ್ರೂ, ವಂಶನ ಉದ್ಧಾರ ಮಾಡಿಕೆ ಒಬ್ಬ ಗಂಡೈದ ಬ್ಯಾಡದಿದ್ದರೂನೂ... ಮುಂದೆ ಬಾವ ದಿನಂಗಲ್ಲಿ ದೈವಗಳ ಚಾಕ್ರಿ ಮಾಡಿಕಾರ್ ಒಬ್ಬ ಹೈದ ಬೇಕೂಂತ ದೈವಕ್ಕೆ ಭಿನ್ನೆ ಮಾಡಿ ಹರ್ಕೆ ಹೇಳಿ ಅಕೇರಿಗೂ ಭೂಮಿಗೊಂದ್ ಗಂಡ್ ಫಸ್ಲ್ ಬೀತ್. ಭೂಮಿ ತಂಪಾತ್. ಕೂಸ್ನ ಹೊಕ್ಳ ಬೊಳ್ಳಿ ಕತ್ತ್‌ರ್ಸಿ ಹಾಳೆಲಿ ಮೊಲ್ಗ್‌ಸಿ ತಲೆ ಹಣ್ಣಾದ ಅಜ್ಜಿಕ ಅವಂಗೆ ಏನೆಸ್ರ್ ಇಸ್ಯಳೊನೋ ಗೊತ್ಲೆ. ದಿನ ಕಳ್ದಾಂಗೆ ಜನಂಗಳ ಬಾಯೆಲಿ ಅಂವ "ಗಂಡೈದನೇ" ಆಗಿ ಒಳ್ಕಂತ್!.

ಪುಂಡಿ ಬಿತ್ತ್ ನೇಜಿ ಆಗಿ... ನೇಜಿ ಹೊಡೆಹೋಗಿ, ಹೊಡೆಒಡ್ದ್ ಕದ್‌ರಾಗಿ... ಕದ್‌ರ್ ಹಾಲಾಗಿ... ಹಾಲ್ ಭತ್ತ ಆದಾಂಗೆ... ಗಂಡೈದ ಬೆಳ್ದ್ ದೊಡ್ಡಂವಾಗಿ ಅಪ್ಪ ಮಾಡ್ವ ದೈವದ ಚಾಕ್ರಿಗೆ ಇಂವನೂ ಸಣ್ಣ ಸಣ್ಣ ಇಸಯಲಿ ಸಾಯ ಮಾಡ್ತಿತ್ತ್. ಕಾಯೆಗಡಿಗೆ ಹೊದ್ರಿ ಬಾಳೆಣ್ಣ್ ಇಸುದು, ಕೋಲ್ತ್‌ರಿ ಕುತ್ತಿಸುದು, ಹಾಳೆ ಕಿಳ್ಳಿ ಮಾಡಿ ಕುರ್ದಿನೀರಿಸುದು ಇಂತದೆಲ್ಲಾ ಕೋಲದ ಸಮಯಲಿ ಹೈದಂಗೆ ಕಾಯ್ಮೆ ಕೆಲ್ಸ! ಅಟ್ಟ್ ಮಾತ್ರಲ್ಲ; ಅಪ್ಪಂಗೆ ದರ್ಶಣ ಬಂದ್ ದರ್ಪುದರ ನೋಡಿ ಕೆಲೊವು ಸರ್ತಿ ಹದ್ಕಿ ಬಿದ್ದ್ ಮರ್ಬ್ಬರೂ.... ಚಾಮಿ ಅಪ್ಪನಕ್ಕಲೆ ಬಂದುಟ್ಟುತೇಳಿ ಕೈಮುಕ್ಕಂಡ್ ಚಾಮಿನ ಭಂಡಾರ ತಕಂಡೋಕನ ದಾರಿ ನೊಡೂಲಿ ಚಾಮಿಗೆ ಬೊಚ್ಚಿರೆತೇಳಿ ಒಂದು ಗಿಂಡಿ ಪುಣ್ಯನೀರ್ನೂ ತಕಂಡ್ ಚಾಮ್ಯೊಟ್ಟಿಗೆ ಇಂವನೂ ಹಜ ಹಾಕ್ತಿತ್.

ಗಂಡೈದ ಬೆಳ್ದ್ ದೊಡ್ಡವ ಆದಾಂಗೆ... ಈ ದೈವ ದೇವ್ರು, ಕೊಲೆ, ಕಾನ್ರೂರ್‌ಗಳ ಬಗ್ಗೆ ಮನ್ಸ್‌ಲಿ ನೂರೆಂಟ್ ಪ್ರಶ್ನೆಗ ಸುಪ್ಷೆ ಆಕೆ ಸುರಾದೊ. ಖಂಡಿತವಾಗಿನೂ ಇಂತ ಒಂದು ಶಕ್ತಿ ಉಟ್ಟಾ... ಯಾಕೆ ಇಂತಾ ಸಂಪ್ರದಾಯ ಕಟ್ಟ್‌ಕಟ್ಲೆಗ? ದೈವದ ಚಾಕ್ರಿಗೆ ನಿತ್ತೊವು ಮಾತ್ರ ಯಾಕೆ ಗೊನೆ ಕಡ್ದ ಮೇಲೆ ಮೀನ್, ಮಾಸ, ಹೆಂಡಸರಾಯ, ಮೂರ್ಹೊತ್ತ್ ಮೀಯಟ; ಅದೂ ಅಲ್ಲದೆ ಕೈ ಹಿಡ್ದ ಹೆಣ್ಣ್‌ನಕ್ಕಲೆ ಸಮೇತ ಹೋಕೆ ಬೊತ್ತ್? ಈ ದೈವ ತೇಳ್ರೆ ಎಂತದ್? ಅದರ ಶಕ್ತಿ ಹೇಂಗೆ? ಅದರ ರೂಪ ಹೇಂಗೆ? ಶುದ್ಧ ಮನ್ಸ್‌ಲಿದ್ದ್, ಇನ್ನೊಬ್ಬಂಗೆ ಕೇಡ್ ಹುಳ್ಕ್ ನಂಜಿ ಮಾಡದಿದ್ದರೆ ಸಾಕಡ "ಆತ್ಮದೊಳಗಿರುವವನು

ಪರ್ಮಾತ್ಮ" ಅಂತ ದೊಡ್ಡೊವೇ ಹೇಳ್ಯಳೊ. ಹಾಂಗಿರ್ಕನ ಮೂರ್ಹೊತ್ತ್ ಮೀದ್ ಫಲಾರ ತಿಂದ್ ಬಿಳೀ ಪಂಚೆ ಮೇಲೆ ಕೆಂಪು ತೋರ್ತ್‌ನ ಕಟ್ಟಿ ಗಂಟ್ಲ್‌ಗೆ ಮಾಲೆ ಹಾಕಿದಾಂಗೆ ದೈವ ನಮ್ಮಕ್ಕಲೆ ಬಂದದೆನಾ...? ಇಂತ ನೂರೆಂಟ್ ಪ್ರಶ್ನೆಗ ತಲೆಲಿ ಕೊರೆತಾ ಇತ್ತ್. ಈ ಪ್ರಶ್ನೆಗಳಿಗೆ ಒಂದ್ ದಿನಾರ್ ಉತ್ತರ ಕಂಡೇ ಕಂಡ್‌ಕಣೆಂತ ಮನ್ಸ್‌ಲೇ ನೆನ್ಸಿಕಂಡ್ ಕೈಗೆ ಸಿಕ್ಕಿದ ಪುಸ್ತಕಗಳ ಓದಿ ರಾಶಿ ಹಾಕಿರೂ... ಅವಂಗೆ ಸಮ್ದಾನ ಆತ್ಲೆ.

ಆದರೆ ಅಪ್ಪನ ಕಾಲ ಕಳ್ದಾಂಗೆ ಊರ್‍ನ ಎಲ್ಲ ತಕ್ಕ ಮುಖ್ಯ ಹಿರೀತಲೆಗೆಲ್ಲಾ ಸಭೆ ಸೇರಿ ತಲೆತಲಾಂತರ್‌ಂದ ನಡ್ಸಿಕಂಡ್ ಬಾತಿದ್ದ ದೈವದ ಪೂಜಾರ್ಮೆ ಚಾಕ್ರಿನ ಗಂಡೈದಂಗೇ ವಯ್ಸಿದ್ದೊ. ಅವನೂ... ದೈವದ ಚಾಕ್ರಿ ಮಾಡ್ದಂರ್ದ ದೊಡ್ಡ ಕೆಲ್ಸ ಈ ಭೂಮಿಲೆಂತ ಉಟ್ಟೂಂತ ಹೇಳಿ ಒಪ್ಪಿಕಂಡತ್ತ್. ಈ ಕುಟ್ಟೆ ಹುಳದಾಂಗೆ ತಲೆ ಹುಕ್ಕ್ ಕೊರ್ಕಂಡ್ ಹೊಡಿ ಹರ್‌ರ್ದಿ ಹೋತಿದ್ದ ಕೆಲೊವು ಪ್ರಶ್ನೆಗಳಿಗೆ ಯಾವ ಪುಸ್ತಕದ ಬದನೆ ಕ್ಯಾನೂ ಬ್ಯಾಡ; ಹಳ್ಬರ ಆಯ್ಸ, ಅನ್ಬವ, ಆಚರ್ಣೆಂದ ಮುಂದೆ ಯಾದೂ ಪ್ರೇಜನ ಬಾಲ್ಲೆ ಹಾಂಗಾಗಿ ನನ್ನ ತಲೆತಿಂಬ ಪ್ರಶ್ನೆಗಳ್‌ಗೆ ಊರ್‍ನ ಹಿರೀತಲೆ "ಮಾದಚಾಂಪ"ನೇ ಸರ್ಯಾದ ಯೆಕ್ತಿ. ಮಾದ ಚಾಂಪ ಸಣ್ಣ ಸಾಮಾನಲ್ಲ. ಅವು ಭಾರೀ ತಿಳ್ಕಂಡವು ಮತ್ತೆ ಜೀವನನ ಅನ್ಬವ್‌ಸಿ ದೊಡ್ಡ ಹಳ್ಳನ ಮೀಸಿ ಉಳಿಯ ಸೇರ್‍ದೊವು. ಭಾರೀ ಮಾತ್‌ಗಾರ, ತರ್ಕಗಾರ, ಅಲ್ಲದೆ ಹಳ್ಳಿಮೊದ್ದ್‌ನ ವೈದ್ಯಗಾರ ಕೂಡಾ. ಆದರೆ ಇತ್ತೀಚೆಗೆ ಹೊರೆಗೆನ ಪರ್ಪಂಚದ ಅವತಾರಗಳ ನೋಡಿ ಮನೆಂದ ಎಲ್ಲಿಗೂ ಹೊರ್ಡಟಿಲ್ಲೆ. ಯಾರಿಗೂ ಬುದ್ಧಿವಾದ ಹೇಳ್ದೂಲೆ! ಅಂತ ಚಾಂಪನಕ್ಕಲೆ ಹೋಗಿ ಗಂಡೈದ ಮಾತಾಡ್ತ್. "ಚಾಂಪ ಇನ್ನೆರ್ಡ್ ತಿಂಗಲ್ಲಿ ಕಾಲಾವ್ದಿ ಕೋಲ. ನಂಗೆ ಸಿಕ್ಕಿ ಸಿಕ್ಕಿದವು, ಕಂಡ ಕಂಡವು ಪೂರಾ ಈ ಸರ್ತಿ ಬಾಳ್ ಭಂಡಾರ ಹಿಡ್ದ್ ಚಾಕ್ರಿ ಮಾಡಿ ದೈವದ ಪೂಜರ್ಮೆ ಮಾಡ್ದು ನೀನೇ... ಭಾರೀ ಸುದ್ಧಲಿರೊಕು. ಏನಾರ್ ಹೆಚ್ಚಕಮ್ಮಿ ಆದರೆ ನಿಂಗೆ ಮಾತ್ರಲ್ಲ ಇಡೀ ಊರ್ಗೇ ದೋಷ" ಅಂತ ಹೆದರ್ಸುವೆ. "ಹಂಗಾರೆ ಚಾಂಪ; ನಿಜಾ ಹೇಳಿ; ಈ ಪೂಜಾರಿ ಯಾರ್ ಅವನ ಕೆಲ್ಸ ಎಂತದ್? ಈ ದೈವ ಶಕ್ತಿ ತೇಳ್ವಂತದ್ ನಿಮ್ಮ ಪ್ರಕಾರಲಿ ಎಂತದ್ ನಂಗೆ ಅದರ ಬಗ್ಗೆ ನೀವ್ಗೆ ಗೊತ್ತಿದ್ದದ್ ಹನೀಸ್ ಹೇಳಿ" ಅಂತ ಕೇಳಿಕಂಡತ್ತ್.

ಮಾದ ಚಾಂಪ ಜೋರ್ಲಿ ಒಮ್ಮೆ ಉಸ್ರೆಳ್ದ್ ಬುಟ್ಟ್, ಬಾಯೆ ತುಂಬ ತುಂಬ್‌ಸಿಕಂಡಿದ್ದ ಎಲಾಡ್ಕೆ ಮಡೆನ ಹೊರೆಗೆ ಉಗ್ದ್ ಬಂದ್ ಕಾಲ್ಮೇಲೆ ಕಾಲಾಕಿ ತಿಂರ್‌ಚಿ ಕುದ್ದ್ ಹೇಳಿಕೆ ಸುರ್ ಮಾಡ್ದೊ, "ನೋಡ್ನೆ ಹೈದಾ.... ಹೇಳೊವು ಸಾವ್ರ ಹೇಳುವೆನೇ... ಹೇಳೊವ್ಕೆ ಹೇಳ್ದೇ ಕೆಲ್ಸಲ್ಲದೆ ಬೇರೆ ಮಾಡಿ ಗೊತ್ಲೆ. ನೀ ಎಟ್ಟೇ ಸರಿ ಮಾಡ್ ಅದರ್ಲಿ ಒಂದ್ ಕೊಂಕಾರ್ ತೆಗ್ದೇ ತೆಗ್ಧವೆ. ನೋಡುನೆ ಬೇಕರೆ, ಯಾವನೋ ಒಬ್ಬ ಪಾಪದಂವ ಮನೆಲಿ ಮೊದ್ವೆ

ಜಂಬರ ತೆಗ್ದ್ ಅಂವ ಮನೆ ಮನೆಗೆ ಹೋಗಿ ಕಾಗದ ಕೊಟ್ಟ್ ಹೋದ ಮೇಲೆ ಇವರ ಆದೈತಾನ ಸುರಾದೆ. ಸುರೂಗೆ ಅದರ್ಲಿ ಹುಡ್ಕುದೇ ತೊಪ್ಪು. ಅದ್ ಹೀಂಗಾಕಾಯ್ತ್... ಅದ್ ಹಾಂಗಾಕಾತ್ತ್‌ಂತ ಹೇಳ್ದಲ್ಲದೆ ಒಬ್ಬ ಮೊಯಿಂಸನಾರ್ ಅವನ ಬೇನೆನ ಅರ್ಥ ಮಾಡಿಕಂಡವೆನಾ ಹೇಳ್? ಇದ್ ಸಣ್ಣ ಉದಾರ್ಣೆ ಇಂತ ಕೊಂಕುಗ ನರಮೊಂಸ್ನ ಈ ಭೂಮಿಲಿ ಉದಿಆದಲ್ಲಿಂದ ಸುರಾಗುಟ್ಟು. ಅದ್ಕೆಲ್ಲ ತಲೆಕೆಡ್ಸಿಕಣದೆ ನೀನಿನ್ನ ಕೆಲ್ಸನ ಮನ್ಸ್‌ಕೊಟ್ಟ್, ಪ್ರಾಮಾಣಿಕಲಿ, ಇನ್ನೊಬ್ಬಂಗೆ ಅನ್ನಾಯ ಆಗದಾಂಗೆ ಮಾಡ್‌ನೇ... ನಿನ್ನ ಒಬ್ಬನ ಕೆಲ್ಸಲಿ ಹತ್ತೂರ್ಜ್‌ನಕ್ಕೆ ಒಳ್ಳತಾದೆ."

"ಹಂಗಾರೆ ಈ ಪೂಜರ್ಮೆ ತೇಲ್ರೆ ಏನ್... ಪೂಜಾರಿಗೂ ದೈವಕ್ಕೂ ಏನ್ ಸಂಬಂಧ ಚಾಂಪ?"

"ಪೂಜಾರ್ಮೆ ತೇಲ್ರೆನೇ... ಒಂದ್ ತಪಸ್ಸ್... ಒಂದ್ ವ್ರತನೇ. ದೈವನ ಒಲ್ಸಿಕಂಬಕೆ ಮಾಡ್ವ ಒಂದ್ ಯತ್ನ. ಒಂದ್ ಕರ್ಡಿಗೆ, ಅದ್ದೊಂದ್ ನೆಣೆಬೊತ್ತಿ, ಒಂದನೀಸ್ ಎಣ್ಣೆ... ಒಂದ್ ಕಡ್ಡಿ... ಇದಿಟ್ಟುನೂ... ಪೂಜಾರ್ಮೆ... ನೀ ಮಾಡ್ದ ಕೆಲ್ಸಲಿ ಅಕೇರಿಗೆ ಹೊತ್ತಿಕಂಬ ಬೊಳ್ಪುನೇ ದೈವ. ಅದೇ ಯತ್ನದ ಫಲ. ಕಣ್ಣ್‌ಗೆ ಕಾಣದ ದೊಡ್ಡ ಶಕ್ತಿನ ಆರಾಧನೆ ಮಾಡಿ, ಆ ಶಕ್ತಿನ ಜೀವ-ಜಿವಾದಿಗಳ ನರ ನಂಬ್ರುಗಳ್ಲಿ ಸಂಚಾರ ಮಾಡ್ಸಿ, ಜೀವ ಕಲೆನ ಉಕ್ಕ್‌ಸಿ ಬೊಳ್ಪು ಕೊಡ್ಸುವ ದೊಡ್ಡ ಕೆಲ್ಸನ ಪೂಜಾರಿ ಮಾಡ್ದೆ. ಅದ್ಕಾಗಿನೇ... ಕೋಲದ ಸಮಯಲಿ ಪೂಜಾರಿ ಬೇಕು. ಪೂಜಾರಿ ತೇಲ್ರೆ ಮುಂದಾಳ್. ಕೊತಾರಿ ಇಲ್ಲೆ ದಲ್ಲಾಳಿ. ದೈವ ಶಕ್ತಿ ಮತ್ತೆ ಮೊನ್ಸರ ನಡೂಲಿ ಕೆಲ್ಸ ಮಾಡಂವನೇ ಪೂಜಾರಿ. ಇನ್ನೂ ಸುಲಭಲಿ ಹೇಳ್ದಾದರೆ ಹೆಣ್ಣ್ ಕೊಡವರ ಮನೆವ್ಕೂ ತಕಂಬವರ ಮನೆವ್ಕೂ ನಡೂಲಿ ಇರುವ ದಲ್ಲಾಳಿ. ಶಭಕಾರ್ಯಕ್ಕೆ ಅವನೇ ಕೊತಾರಿ.

"ಅಲ್ಲ ಚಾಂಪಾ ಮನ್ಸ್ ಶುದ್ಧ ಇದ್ದರೆ ಸಾಕಲ್ಲ? ಈ ಮೀನ್ ಮಾಸ, ಹೆಂಡಸರಾಯ, ಎಲ್ಲ ಯಾಕೆ ಬುಟ್ಟ್‌ನಿತ್ತ್ ಪಾಲನೆ ಮಾಡೊಕು?"

"ಮನ್ಸ್ ತೇಲ್ವಂತದ್ ಹಿರೆವು ಹೇಳ್ದಾಂಗೆ ಮರ್ಕಟನೇ..! ಅದರ ಹಿಡ್ದ್ ಮುಂಡಿಲಿಸಿಕಂಡ್ ಸರ್ರನೂ... ಆತ್ಮನೂ... ಹನೀಸ್ ದಿನಾರ್ ಒಂದೇ ದಿಕ್ಕ್‌ಲಿರೊಕು. ಅದ್ಕಾಗಿನೇ ಈ ಕಸ್ರತ್‌ಗ...! ಸುಮ್ಮಂಗಾರ್ ನನ್ನ ಮನ್ಸ್ ಸುದ್ಧ ಉಟ್ಟು. ನಾ ಯಾರ್‍ನೂ ಹಾಳ್‌ಮಾಡ್ತ್‌ಲೆ, ಯಾರಿಗೂ ಅನ್ನಾಯ ಮಾಡ್ತ್‌ಲೇಂತ ಬಾಯೆ ಮಾತ್‌ಲಿ ಹೇಳಕ್ಕ್ ಆದರೆ ಮನ್ಸ್‌ನೊಳಗೆ ಕೈ ಹಾಕಿ ನೋಡಿಕಾದೆನಾ ಹೇಳ್? ನಾವು ಮಾಡ್ವ ಕೆಲ್ಸಲಿ ಹಿಡ್ತ ಸಾಧಿಸಿಕಂಬಕಾಗಿನೇ... ಹಿರೆವು ಕೆಲೊವೊಂದ್ ಬಗೆನ ನೀತಿ, ನೇಮಗಳ ತಕಂಡ್ ಬಂದದ್. ಇದ್ ನಾನೂ ತಂದದಲ್ಲ ನಿನ್ನ ಉಕ್ಕಪ್ಪನೂ.... ತಂದದಲ್ಲ... ಶತಸಾವ್ರ ವರ್ಸಂದನೂ...

ಆಚರಣೆಗ, ಸಂಪ್ರದಾಯಗ ಬಳ್ಕೆಲಿ ಒಳೊ. ಹೆಣ್ಣ್, ಹೊನ್ನ್, ಮೊಣ್ಣ್‌ತೇಳ್ವಂತ ಮಾಯ್ಕಲಿ ಸಿಕ್ಕಿ ಎಂತೆಂತಾ ಲಡಾಯಿ ನಡ್ದ್ ಹೋಗಿ ಎಟ್ಟೋ ಹೇಳಿ ಹೋದ ವಂಶಗ ಎಲ್ಲ ನಿರ್ವೊಂಶ ಆಗಿ ಹೋಗಳೊ. ಅಂತದರ್ಲಿ ನಾವು ನಿನ್ನೆ ಹೊಯ್ದ ಮಳೆಗೆ ಎಂದ್ ಹುಟ್ಟಿಕಂಡ ಅಳ್‌ಂಬುಗ... ಒಳಿವೊನಾ... ಹೇಳ್? ನೀ ಬೇಕಾದ ಅನಾಚಾರ ಮಾಡಿಕಂಡ್ ಚಾಕ್ರಿ ಮಾಡಕ್ಕ್. ಮಾಡಿಕಾದೆ ಕೂಡಾ... ಆದರೆ ಒಂದಲ್ಲ ಒಂದ್ ದಿನ.. ನಿನ್ನ ಮನ್ಸ್‌ಗೇ ಆ ಪಾಪದ ಕೆಲ್ಸ ಕಾಡಿಕೆ ಸುರಾದೆ. ಆಗ ನೀ ಕಂಗಲಾದಿಯ ಆಗ ಒಟ್ಟಿಗೆ ಯಾರಿರ್ದುಲೆ. ಹಾಂಗಾಗಿ ಯಾದೇ ಕೆಲ್ಸ ಮಾಡ್‌ನೀ... ಮನ್ಸಿದ್ದ್ ಕೆಲ್ಸ ಮಾಡ್... ಶರ್‍ರ... ಬುದ್ಧಿ... ಮನ್ಸ್ ಎಲ್ಲ ಒಂದಾದರೆ ನಿಂಗೆ ಹಿಡ್ದ ಕೆಲ್ಸಲಿ ಜಯ ಖಂಡಿತ... ಮನ್ಸ್ ಹರಿವ ನೀರ್‍ನಾಂಗೆ. ನಿನ್ನ ಮನ್ಸ್ ಶುದ್ಧ ಇದ್ದಾಂಗೆ ಹರಿವ ನೀರೂ ಶುದ್ದ.... ನೋಡ ನೀ ಹೋಗಿ ಹಳ್ಳದ ನೀರ್‍ನ ಯಾದೇ ಪೂರ್ವದ ಯೋಜನೆ ಇಲ್ಲದೆ ಬೆರಿಕೈಲಿ ಹಿಡ್ದ್ ನಿಲ್ಸ್ ನೋಡಾ.... ಆದೆನಾ.. ಹೈದ... ಒಬ್ಬ ಬೇಸಾಯಗಾರ ಇದ್ದ ಒಂದ್ ಗದ್ದೆಲಿ ಭತ್ತ ಬೆಳೆಕರೆ... ಯಾವ ಯಾವ ಗಳ್ಗೆಲಿ.... ಯಾವ ಕೆಲ್ಸ ಮಾಡೋಕೂಂತ ಮುಂದೆನೇ ಅಲೋಚನೆ ಮಾಡಿಕಂಡ್ ತಪಸ್ಸ್ ಮಾಡ್ದಾಂಗೆ ಮಾಡಿ ಬೆಳೆ ಬೆಳ್ದದೆ. ಬಂದ ಬೆಳೆ ದೈವ ಫಲ... ಮಾಡ್ದ ಕೆಲ್ಸ ಪೂಜಾರ್ಮೆ... ಇಟ್ಟೇ ಸಂಗತಿನೇ ಹೈದ!"

"ಅಂದರೆ ಈ ದೋಷ ಬಂದದೆ ತೇಳ್ವಂತದ್ ಯೆಂತ ಚಾಂಪಾ....?"

"ಅದ್ ನಿನ್ನ ಕೆಲ್ಸ ನಿನ್ನ ಕರ್ಮ ಫಲ... ನೋಡು; ನಿನ್ನ ತೋಟಕ್ಕೆ ಕಾಲ ಕಾಲಕ್ಕೆ ಏನ್ ಈಟ್ ಹಾಕೊಕೋ.... ಮೊದ್ದ್ ಬುಡೊಕೋ... ಅದ್ ಮಾಡದಿದ್ದರೆ ಅದ್ಕೆ ಖಂಡಿತಾ ರೋಗ ಬಂದದೆ ತೋಟ ಒಣ್ಗಿದೆ... ಹಾಂಗೆ ಬಂದ ರೋಗ.... ನೆರೆಕರೆಗೆ... ದಾಟಿ.... ಊರ್ತುಂಬಾ ಮಾರಿ ಹಬ್ಬಿದೆ. ಅದ್ ನಿನ್ನಂದಾಗಿನೇ... ಊರ್ಗೆ ಹಬ್ಬಿತ್. ನೀ ಹನೀಸ್ ಜಾಗ್ರತೆ ಮಾಡ್ರೆ ಈ ಕೊಸ್ರಂಗೊಳ್ಳಿ ಬಾತಿತ್ತಾ... ಹೇಳ್?"

"ಅದ್ ಸರಿ; ತೋಟದ ಸಂಗತಿಲಿ ಸರಿ ದೈವದ ವಿಷಯಲಿ ಹೇಂಗೆ?

"ಹತ್ತ್ ಜನ ಸೇರಿ ತಾನೆ ನಿನ್ನ ಈ ಕೆಲ್ಸಕ್ಕೆ ನೇಮಕ ಮಾಡ್ದ್?"

"ಹೌದು"

"ಹಾಂಗಿದ್ದಮೇಲೆ ನೀ ಉಂಡ್ ತಿಂದ್ ಒಳ್ದದರ ಯಾರ್ ತಿನೊಕು ಹೇಳ್"

"ಉಫ್ ಎಂತಾ ಮಾತ್ ಚಾಂಪ ಅರ್ಥಾತ್ ಬುಡಿ"

"ಇಟ್ಟೆಲ್ಲ ಸರಿ; ಹಂಗಾರೆ ನಿಮ್ಮ ಪ್ರಕಾರಲಿ ದೈವ ತೇಳ್ರೆ ಎಂತದ್?"

"ದೈವ ತೇಳ್ರೆ "ದೈವನೇ"... ಹೈದ ಅದ್ಕೆ ಇನ್ನೊಂದ್ರೆಸ್ ಇಲ್ಲೆ. ದೈವದ ಬಗ್ಗೆ ಅದ್ ಇಂತದೇ.. ಅದ್ ಹಿಂಗೆನೇ... ತೇಳ್ವಂತ ಅಭಿಪ್ರಾಯ ಕೊಡುವಟ್ಟ್ ಅದರ ಬಗೆ ಮಾತಾಡುವಟ್ಟ್

ದೊಡ್ಡಂವ ನಾ ಅಲ್ಲ. ಎಂತೆಂತವೋ... ಅದರ ಬಗ್ಗೆ ತರಾವರಿ ರೀತಿಲಿ ಹುಡ್ಕಿನೋಡ್ಯಳೊ. ಅವವು ಹುಡ್ಕಿ ನೋಡ್ದ ದಾರಿನನೇ ದೈವಾಂತ ಹೇಳ್ದೊ. ಇತಿಹಾಸನ ತೆಗ್ದ್ ನೋಡ್ ಕಾಲಕಾಲಕ್ಕೂ ದೇವ್ರು ಬದಲಾತಾ ಒಳೊ... ಒಬ್ಬಂಗೆ ರಾಮ, ಮತ್ತೊಬ್ಬಂಗೆ ಕೃಷ್ಣ, ಹೀಂಗೆ ಒಂದೊಂದ್ ಯುಗಲಿ ದೈವಗ ಬೇರೆ ಬೇರೆ ರೂಪಲಿ ಬಂದೋ. ಆದರೆ ಆ ಶಕ್ತಿ ಒಂದೇ... ಬಂದ್ ಬಂದ್ ನಾವು ಎಲ್ಲಿವರೆಗೆ ಬಂದಳೊಂತೇಳ್ರೆ ಈಗ ಮೊನ್ನನೇ ದೈವತೇಳುವಷ್ಟರ ಮಟ್ಟಿಗೆ ಮುಂದೊರ್ದಳೊ. ಪ್ರಕೃತಿಲಿರುವ ಒಂದೊಂದು ಶಕ್ತಿನ ಅವತಾರಗಳ್ನೇ ನಾವು ದೈವ-ದೇವ್ರುಂತ ಕರ್ಕಂಡ್ ನಾವ್ಗೆ ಇಷ್ಟ ಬಂದ ಹೆಸ್ರ್ ಕೊಟ್ಟ್‌ಕಂಡ್ ಕೊಂಡಾಡ್ದೊ. ಆದರೆ ಆ ಶಕ್ತಿನ ಯಾರೂ ಹಿಡ್ದ್ ನೋಡ್ದವಿಲ್ಲೆ... ಕಂಡವಿಲ್ಲೆ... ಅದ್ಕನೇ ಅದ್ "ದೈವ"! ಒಬ್ಬೊಬ್ಬ ಒಂದೊಂದ್ ಅವರ ಸೊಂತ ಸೊಂತ ಅಭಿಪ್ರಾಯಲಿ ದೈವತೇಳ್ರೆ ಹೀಂಗೆನೇ ಅಂತ ಹೇಳಿಕೆ ಸುರುಮಾಡ್ದೊ... ಅವರವರ ಅನ್ಭವದ ಮೇಲೆ. ಆದರೆ ಇದುವರ್ಗೂ... ದೈವ ತೇಳ್ರೆ ಇಂತದೇ ಶಕ್ತಿಂತ ಹೇಳಿಕೆ ಯಾರಿಗೂ ಸಾದ್ಯ ಆತ್ಲೆ. ಬೇಸಾಯಗಾರಂಗೆ ಬೆಳೆನೇ ದೇವ್ರು, ಕಲಿವ ಹೈದಂಗೆ ವಿದ್ಯೆನೇ ದೇವ್ರು, ಯಾಪಾರ ಮಾಡವಂಗೆ ಯಾಪಾರನೇ ದೇವ್ರು, ನಡಿವ ದಾರಿ, ಕುಡಿವ ನೀರ್, ತಿಂಬ ಗಂಜಿ ಅದೇ ದೇವ್ರು. ಕೆಲೊವು  ಕಾಮಲಿ ದೈವನ ಕಂಡೊ. ಇನ್ನ್ ಕೆಲೊವು ಪ್ರೇಮಲಿ ದೈವನ ಕಂಡೊ. ಹೆಣ್ಣ್ ಗಂಡ್‌ಗೆ, ಜೀವ ಜೀವಾದಿಗೆ, ಚರ, ಸ್ಥಿರಕ್ಕೆ ಬೊದ್ಕಿಕೆ ಬೇಕಾದ ಒಂದು ಶಕ್ತಿನೇ ದೈವ. ಆ ಶಕ್ತಿ ನೆಲ್ಸಿಕೆ ಒಂದ್ ನೆಲೆ ಬೇಕು. ನೆಲೆ ಆಕೆ ಒಂದ್ ಕಲೆ ಇರೊಕು. ಆ ಕಲೆನ ಆರಾಧಿಸಿಕೆ ನೂರ್ ಸಾವಿರ ಕೈಗ ಬೇಕು. ಆ ಕೈಗಳಿಗೆ ಮನ್ಸಿರೊಕು! ಮನ್ಸಿದ್ದ್ ಇಟ್ಟಪಟ್ಟ್ ಮಾಡ್ದ ಪ್ರತಿ ಒಂದ್ ಕೆಲ್ಸನೂ... ಅವರವರ ಪಾಲ್ನ ದೈವ! ಹುಟ್ಟಿದ ಪ್ರತಿಒಂದೂ ಜೀವಾದಿನನೂ ಕಡೆ ವರ್ಗೆ ಕೈ ಹಿಡ್ದ್ ಕಾಪಾಡುವ ಪ್ರಕೃತಿನೇ.... ದೈವ.... ಸತ್ತ ಜಿವಾದಿಗಳ ಆತ್ಮಗಳೇ ಅದರ ಶಕ್ತಿ...! ಶರ್ರಕ್ಕೆ ಮಾತ್ರ ಸಾವು ಆತ್ಮಕ್ಕೆ ಸಾವಿಲ್ಲೆಗಡ.... ಇಂದ್ ಹುಟ್ಟಿದೆ, ನಾಳೆ ಬೊದ್ಕಿದೆ ನಾಳ್ದ್ ಸತ್ತದೆ. ಮತ್ತೆ ನಾಳೆ ಹುಟ್ಟಿದೆ.... ಯಾದೋ ಯುಗಲಿ ಯಾದೋ ರೂಪಲಿ...! ಹೆಣ್ಣ್ ತೇಳ್ವ ಪ್ರಕೃತಿ ದೈವ ಆದರೆ; ಗಂಡ್ ತೇಳುವ ಪುರ್ಷ ಪೂಜಾರಿ..! ಇವರಿಬ್ಬರ ಸಂಧಾನ, ಸಮಾಗಮದ ಫಲನೇ... ಕಾಣದೆ ಕೈ ಹಿಡಿವ ಶಕ್ತಿ..! ಸುರೂಗೆ ನಮ್ಮ ನಮ್ಮೊಲ್ಲಿರುವ ದೈವ ಶಕ್ತಿನ ಕಂಡ್‌ಕಮ್ಮೊ ಮತ್ತೆ ಅದರ ಬಗ್ಗೆ ಪ್ರಶ್ನೆ ಮಾಡನೊ. ದೈವ ನಮ್ಮ ಆಚರ್ಣೆಲಿ ಒಳದ್ ಆಡಂಬರಲಿ ಅಲ್ಲನೆ ಹೈದಾ!".

"ಇದ್ಯಾಕೋ ನಂಗೆ ಅರ್ಥ ಆತಾ ಇಲ್ಲೆ ಚಾಂಪಾ...!"

"ಅರ್ಥಗಳ ಹುಡ್ಕೆಂಡ್ ಹೋದಟ್ಟ್ ಅನರ್ಥಗಳೇ ಜಾಸ್ತಿ... ಪ್ರಶ್ನೆಗಳ ಕೇಳಿಕಂಡ್ ಹೋದಾಂಗೆ ಪ್ರಶ್ನೆಗಳೇ... ಪ್ರಶ್ನೆಗಾದವೆ! ಉತ್ತರಗಳ ಹುಡ್ಕೆಂಡ್ ಹೋದಟ್ಟ್ ಉತ್ತರಗಳೇ

ಉತ್ತರಗಾದವೆ..!"

"ಚಾಂಪಾ ಇಟ್ಟೊತ್ತ್ ನೀವು ಹೇಳ್ದರ್ಲಿ ನನ್ನ ತಲೆಗೆ ಎಟ್ಟ್ ಹೋತೋ ಗೊತ್ಲೆ! ಎಟ್ಟರ ಮೊಟ್ಟ್‌ನ ಸತ್ಯಾಂತನೂ ಗೊತ್ಲೆ. ನಿಮ್ಮಂಥ ಹಿರೆವು ನಮ್ಮಂಥಾ ಕಿರಿಯವ್ಕೆ ಬುದ್ಧಿ ಹೇಳಿ ಸರಿದಾರಿಲಿ ನಡ್ಸುದರ ಬುಟ್ಟ್ ಏನೂ ಗೊತ್ತಿಲ್ಲದವರಾಂಗೆ ಸುಮ್ಮನೊಳರಿ ಅಲ್ಲ ಇದ್ ಸರಿನಾ ನೀವೇ ಹೇಳಿ?"

'ಕೊಡಿಕೆ ನಮ್ಮೊಂತವು ಸಾವಿರ ಜನ ಒಳೊ. ತಕಂಬಕೆ ನಿಮ್ಮೊಂಥವು ತಯಾರೊಳರಿನಾ....? ನೀವ್ಗೆ ನೀವ್ಗೆನೇ ಕೆಲೊವು ಸೊಂತ ಅಭಿಪ್ರಾಯಗ ಇರ್ದುಲೆನಾ...? ನಿಂಗೆ ನನ್ನಟ್ಟ್ ಪ್ರಾಯ ಆಗಲಿ... ಆಗ ನಿನ್ನ ಪ್ರಶ್ನೆಗಳ ನಿಂಗೆ ನೀನೇ ಕೇಳಿಕ ಉತ್ತರ ತನ್ನಿಂತಾನೇ ಸಿಕ್ಕಿದೆ ನಿಂಗೆ! ಅಧಿಕಾರಲಿ ನೀ ಎಟ್ಟ್‌ದಿನ ಇದ್ದೇಂತೇಳ್ವ ಸತ್ಯ ಬೇಡ... ಎಟ್ಟ್ ಕಿತ್ತ್ ರಾಶಿ ಹಾಕಿದಾಂತೇಳ್ದೇ... ಸತ್ಯ...! ಸತ್ಯ ಯಾಗೋಳು ಮಾಯಕ್ಕೆ; ಮೊನ್ಸರಿಗಲ್ಲ!!

ಚಾಂಪನ ಕೆಲೊವು ಮಾತ್‌ಗ ಏನ್ ಎತ್ತಾಂತ ಅರ್ಥ ಆಗದೇ... ಗಂಡೈದ ಸೀದಾ ಮನೆಗೆ ಬಾತ್... ಆದರೆ ಒಂದ್ ಮಾತ್ ಮಾತ್ರ ಅವನ ಕೆಬಿಲಿ ಗುಂಯ್‌ಗುಟ್ಟಿಕೆ ಸುರಾಗುಟ್ಟು... ಸರ್‍ರಕ್ಕೆ ಮಾತ್ರ ಸಾವು... ಆತ್ಮಕ್ಕೆ ಸಾವಿಲ್ಲೆ... ಅದೇ ದೈವತ್ವದ ಶಕ್ತಿ. ಆ ಶಕ್ತಿ ಮತ್ತೆ... ಮತ್ತೆ ಜೀವತಳ್ದ್ ಹುಟ್ಟಿಬಂದದೆ.!!

ಅಂದ್ ಪೊಗ್ಗು ಇಪ್ಪತ್ಮೂರರ ರಾತ್ರಿ. ಆ ದಿನ ಶಿರಾಡಿನ ಮೂಲಸ್ಥಾನಂದ ಭಂಡಾರ ತೆಗ್ದ್ ಗಡಿಯಡಿ ಸ್ಥಾನಕ್ಕೆ ಹೋವ ಗಳ್ಗೆ. ಗರ್ನಾಲ್ ಸದ್ದ್ ಬಾನಕೊಡಿನ ಮುಟ್ಟಿದೆ. ಆಳ್‌ಗೊಂದರಾಂಗೆ ಮಡ್ಲ್‌ನ ಸೂಟೆಗ ಬೊಳ್ಪು ಕೊಟ್ಟದೆ. ಬ್ಯಾಂಡ್‌ವಾದ್ಯದೊಟ್ಟಿಗೆ ಅಜಲನ ತೆಂಬರೆನ ಸದ್ದ್‌ನೂ ಸೇರಿಕಂಡತ್ತ್. ಕುಂಟು ಪೂಜಾರಿ ದೈವದ ಚಾಕ್ರಿಗೆ ಬೇಕಾದ ಎಲ್ಲಾ ಸೊತ್ತ್‌ಬೊಡ್ಕ್‌ಗಳ ಸವ್ದಾನಲಿ ತೆಗ್ದ್ ಕಟ್ಟ್‌ಮಾಡಿ ಕಟ್ಟಿಸಿದೆ. ಮೀದ್ ಮೊಡಿ ಉಟ್ಟ್ ಬಂದ ದೈವದ ಚಾಕ್ರಿನವರ ಪ್ಯೊಕಿಲಿ ದೀಟಿಗೆ ಪೂಜಾರಿ ಸುರೂಗೆ ಭಂಡಾರಕ್ಕೆ ಆರತಿ ಎತ್ತಿ ಊರ್‍ನ ಹಿರೆವನ ಭಿನ್ನೆನುಡಿಗಾಗಿ ಪಾರಕಾದವೆ. ಮೊಡ್ಯಾಳ ದೈವದ ಮೊಗಕ್ಕಾಗಿ ಕೈಒಡ್ಡಿನಿತ್ತುಟ್ಟು. ಸುರೂನ ಸರ್ತಿ ಭಂಡಾರ ಹಿಡಿವ ಗಂಡೈದ ಮೀದ್ ಮೊಡಿ ಉಟ್ಟ್ ಮನ್ಸ್ ತುಂಬ ಭಯ ಭಕ್ತಿನ ತುಂಬುಸಿಕಂಡ್ ಮುಂದೆನ ಕಾರ್ಯಕ್ಕೆ ಕಾದ್‌ಕಂಟ್ಟು. ಅಟ್ಟೊತ್ತಿಗೆ ಊರ್‍ನ ಹಿರಿಜೀವ ಕೊರ್ಗಪ್ಪ ಗೌಡ್ರು ಕೈ ಮುಗ್ದ್ ಕಣ್ಮುಚ್ಚಿ ದೈವದೊಟ್ಟಿಗೆ ಪ್ರಾಥನೆ ಮಾಡಿಕಂಬ ಸೊರಕೇಳ್ತ್.

"ಸ್ವಾಮೀ ದೈವನೇ... ಗುರ್‌ಹಿರ್‍ಯರ ಕಾಲಂದಳೂ... ಪೂರ್ವಕಟ್ಲೆ ಪ್ರಕಾರಲಿ ಈ ಮೊಣ್ಣ್ ಮನೆ ಸ್ಥಾನಲಿ ನೆಲೆನಿತ್ತ ನಿಂಗೆ ಕಾಲಾವ್ದಿ ಕಟ್ಟ್‌ಕಟ್ಲೆ ಪ್ರಕಾರಲಿ ಪೊಗ್ಗು ಹದ್ನೆಂಟ್ಟಕ್ಕೆ

ಗೊನೆಕಡ್ದ್ ಪೊಗ್ಗು ಇಪ್ಪತ್ಮೂರಕ್ಕೆ ಕೂಡಿ ಇಪ್ಪತ್ನಾಕಕ್ಕೆ ಕೋಲಕೊಟ್ಟ್ ಗಡಿಯಡಿ ಸ್ಥಾನಲಿ ಒಂದ್ ದಿನದ ನಿರ್ಪುನಿತ್ತ್; ಇಂದ್‌ನ ದಿನಲಿ ಕುಟುಂಬ, ಊರು, ಗ್ರಾಮದೊವು ಎಲ್ಲೊವು ಸೇರಿ ಓಬುದ್ಧಿಂದ ತೀರ್ಮಾನ ಮಾಡಿಕಂಡ್ ನಾವು ಕೊಟ್ಟ್ ಕೊಂಡಾಡ್ವ ನಿನ್ನ ಭಂಡಾರನ ಇಂದ್‌ನ ಮೂರ್ತಲಿ ತೆಗ್ದ್ ನಿಂಗೊಂದ್ ಬೊಳ್ಳುಕೊಟ್ಟ್ ಆ ಬೊಳ್ಳುಲಿ ನಾವೆಲ್ಲೊವು ಬೊದ್ಕುನ ಕಾಂಬಕಾಗಿ ಬಂದ್‌ನಿತ್ತಳೊ. ಆ ಪ್ರಕಾರಲಿ ಕಡ್ದ್‌ತೂಗಿದಂತ ಗೊನೆಲಾಗಲಿ, ಹೊತ್ಸಿದ ನಂದಾದೀಪಲಾಗಲಿ, ಮೀದುಟ್ಟ ಮೊಡಿಲಾಗಲೀ ಅನೇಕ ರೀತಿ ಸಾತ್ರತೊಪ್ಪು ಬಂದರ್ನೂ, ತೊಪ್ಪು ಬುಟ್ಟ್ ಒಪ್ಪು ಸಾದ್ಸಿಕಂಡ್; ಸ್ವಾಮೀ ದೈವರ್ನೇ... ದೀಟಿಗೆ ಹಿಡಿವ ದೀಟಿಗೆವಂಗಾಗಲಿ, ಮೊಗ ಹಿಡಿವ ಮೊಡ್ಯಾಳಂಗಾಗಲೀ; ನಿನ್ನ ಮತ್ತೆ ಗುರ್‌ಹಿರ್‍ಯರ ನಿಚ್ಚಯಲಿ ಈ ಕಾಲಾವ್ದಿಂದ ನಿನ್ನ ಚಾಕ್ರಿಗೆ ನಿತ್ತ್ ಮೀದ್ ಮೊಡಿ ಉಟ್ಟ್ ಬಾಳ್ಬಂಡಾರನ ಹಿಡಿವ ಪೂಜಾರಿಗಾಗಲಿ, ಅಣಿ ಕಟ್ಟಿ ಕೋಣಿವ ಅಜಲಂಗಾಗಲಿ, ಹೊರ್ದ ಹೊದ್ರಿಲಾಗಲಿ, ಮಾಡ್ದ ಕುರ್ದಿಲಾಗಲಿ, ಅಚ್ಚಿಲ್-ಪಚ್ಚಿಲ್ ಕೊಟ್ಟ್ ನಿನ್ನ ಸೇವೆಗೆ ಬಂದ ಮನೆ, ಕುಟುಂಬ, ಊರ್, ಕೇರಿ, ಗ್ರಾಮ ನಂಟ್ರ್‌ನಾಡ್ರ್‌ಗಳಿಗಾಗಲಿ... ತೆಗ್ದನಡೆಲಿ, ಹಿಡ್ದ ಹಿಡ್ತಲಿ, ಹಾಕಿದ ದೊಂಪಲಿ ಯಾದೇ ರೀತಿನ ತಾಪತ್ರೆ ಕಂಡ್ ಬರದೆ ತಾವು ಬುಟ್ಟ ಭಂಡಾರ ಸಂತೋಷಲಿ ತಾಣ ಸೇರೋಕು; ಸಾಭೀತಿಲಿ ತೆಗ್ದ ಭಂಡಾರನ ಸಾಭೀತಿಲಿ ಬಂದ್ ಸೇರ್ಸುವಂತ ಪುಣ್ಯಕೀರ್ತಿ... ದೈವಶೀರಾಡಿಗೂ... ನಿನ್ನ ಎಡ್ಡಬಲ್ದಲಿರುವ ಉಪ ದೈವಗಳಿಗೂ... ಕುಲದೇವ್ರು ಯಂಕಟ್ರಮಣನೂ... ಅಲ್ಲದೆ ನಮ್ಮ ಗುರುಕಾರ್ನೂರ್ರ್ನ ಆಶಿರ್ವಾದನ ಬೇಡಿಕಂಡ್ ಸರ್ವರೊಟ್ಟಿಗೆ ಕೇಳಿ ಶ್ರೀ ದೈವದ ಭಂಡಾರ ತೆಗ್ದವೆ... ಭಂಡಾರ ತೆಗ್ದವೆ... ಭಂಡಾರ ತೆಗ್ದವೆ"

ಮೊಡ್ಯಾಳ ದರ್ಶನ ಬಂದ್ ದರ್ಪಿದೆ, ಸುರೂನ ಸರ್ತಿ ಬಾಳ್ ಭಂಡಾರ ಹಿಡಿವ ಗಂಡ್ಯದ ಮನ್ಸ್‌ಲೇ ಎಲ್ಲ ದೈವ ದೇವ್ರ ನೆನ್ಸಿಕಂಡತ್... ಮಾದ ಚಾಂಪ ಹೇಳ್ದ ಒಂದೊಂದ್ ಮಾತ್‌ಗಳೂ... ನೆಂಪುನ ಮೇಲೆ ನೆಂಪುಗೆ ಬಾತ್. ಊರ್‍ನ ಹಿರೆವ್ಕೆ ಮನ್ಸ್‌ಲೇ ನಮಸ್ಕಾರ ಹಾಕಿತ್ತ್. ತೀರಿಹೋದ ಅಜ್ಜಪ್ಪನ, ಅಪ್ಪನ ಆತ್ಮಗಳ ನೆನ್ಸಿಕಂಡತ್. ಆ ಶಕ್ತಿನ ಮನ್ಸ್‌ಕೊಟ್ಟ್ ಬೇಡ್ತ್. ಎದೆ ಒಳೆಗೆ ಚಳ್ಕ ಚೆಳಿ ಕುದ್ದ ಅನ್ಬವ ಆತ್... ಮೈ ಅಕ್ಕಿಒಡ್ತ್. ಸುತ್ತಳೂ... ಒಂದ್ ಚಣ ಯಾರ ಸುದ್ಧಿ ಸದ್ದೂ ಇಲ್ಲೆ. ಅಲ್ಲಿನ ಇಡೀ ವಾತಾವರ್ಣನೇ... ದೈವ ಶಕ್ತಿಂದ ತುಂಬಿ ಹೋಗಿತ್ತ್. ಒಮ್ಮಗೆ ಗರ್ಲಾಲ್ ಸದ್ದ್ ಊರ್‌ಕೇರಿ ಕಲ್ಯಾಳ ಕೊಡಿ ಮುಟ್ಟಿತ್. ಸೇರ್ದ ಜನಂಗ ಒಮ್ಮೆ ಹದ್ಕಿ ಬಿದ್ದೊ. ಬೇಂಡ್‌ವಾದ್ಯದ ಸದ್ದ್ ಜೋರಾತ್. ಗಂಡ್ಯದ ಬಲ್ದಕೈಲಿ ಕೈಕಡ್ತಲೆ, ಎಡ್ಡ ಕೈಲಿ ಅಡ್ಯಾಣ ಹಿಡ್ಕಂಡ್ ಮೂಡಕ್ಕೊಂದ್ ನಮುಸ್ಕಾರ ಮಾಡಿ ದೀಟಿಗೆ ದೀಪದೊಟ್ಟಿಗೆ ಸೂಟೆ ಬೊಳ್ಳುಲಿ ದೈವದ ಭಂಡಾರ ಮುಂದೆ ಮುಂದೆ... ದಾರಿ ಸಾಗ್ಯಂಡ್

ಗಡಿಯಡಿ ಸ್ಥಾನಕೆ ಹೋತಾ ಇತ್ತ್. ಬಂದ್ ಸೇರ್ದ ಜನಂಗೆಲ್ಲಾ ದೈವನ ಮನ್ಸ್‌ಲೇ ನೆನ್ಸಿ ಕೈ ಮುಗ್ದೊ. ಭಂಡಾರ ಸುಮಾರ್ ಒಂದ್ ಪರ್ಲಾಂಗ್ ದೂರ ಹೋಗಿರ್ದ್ದ ಅಟ್ಟೊತ್ತಿಗೆ ಯಾರೋ ಒಂದೇ ಸರ್ತಿಗೆ ಕಿರ್ಚಿ ಆರ್ಭಟೆ ಕೊಡುವ ಸೊರ ಕೇಳ್ತ್ "ಹಿಡ್ಕಣಿಯಾ....! ಹಿಡ್ಕಣಿ...!!"

ಬಾಳ್ಬಂಡಾರ ಹಿಡ್ದ ಪೂಜಾರಿ ಒಂದೇ ಸರ್ತಿಗೆ ಭಂಡಾರ ಹೋವ ದಾರಿಂದ ಒಂದ್ ಕೊದೆ ತೆಲ್ಗಿ ಅಡ್ಡ ಕಟ್ಟಿದ ಬೆದ್ರ್ ಬೇಲಿನ ಕಡ್ಪ ಹಾರಿ ಕರಿ ಕತ್ತಲೆಲೇ ಓಡ್ತಿತ್ತ್...! ಸೂಟೆ ಹಿಡ್ಕಂಡಿದ್ದ ಗಂಡಾಳ್ಗಳೂ.... ಓಡ್ದೊ.... ಪೂಜಾರಿ ಗಂಡೈದಂದ್ ಅದೆಂದಾ ಓಟು...! ಬಿಲ್ಲ್‌ಂದ ಬುಟ್ಟ್ ಬಾಣದಾಂಗೆ.... ಅದೆಂದಾ ಶಕ್ತಿ... ಅದ್ಯಾವ ಮಾಯಕ...!! ಆ ಕರಿಕುಟ್ಟಿ ಕತ್ತಲೆಲೇ.... ಹಿಡ್ದ ಭಂಡಾರನ ಬುಡದೆನೇ.... ಓಡಿ ಹೋಗಿ ಕೈ ಜೋಡ್ಸಿ ಇರ್ಮುಂಡ ಹಾಕಿ ನಮುಸ್ಕಾರ ಮಾಡ್ದ್; ಸುಮಾರ್ ಎರ್ಡ್ ಮ್ಯೊಲ್ ದೂರಲಿರುವ "ದೊಡ್ಡ ಪೂಜಾರ್ಯಜ್ಜನ ಮತ್ತೆ ಅಪ್ಪ ಕಾರ್ಯಪ್ಪ ಪೂಜಾರಿನ ಇಸಿದ ದೂಪೆಗಳಿಗೆ!!

***

# ನವಿಲ್ಗೆರಿ...

"ಅವ್ವಾ... ಅವ್ವಾ... ನೋಡವ್ವ ಇಲ್ಲಿ.... ಶಾಲೆ ಬುಟ್ಟ್ ನಡ್ಕಂಡ್ ಬಾಕನ ಈ ಗೆರಿ ದಾರಿಕರೆಲಿ ಬಿದ್ದ್‌ಕಂಡಿತ್ತ್. ಮಕ್ಕೆಲ್ಲಾ ಹೇಳ್ದೊ.. ಇದ್ ನವಿಲ್ಗೆರೀಂತ...! ಇದರ ಜಾರ್ಕ್‌ರ್ತೆಲಿ ಪುಸ್ತಕ ಸೆರೆಲಿ ಮೊಡ್ಸಿ ಇಸಿರೆ ಇದ್ ಮೊರಿ ಹಾಕಿದೆಗಡವ್ವಾ.. ನೋಡ್ ಎಟ್ಟ್ ಲ್ಯಾಕ ಮಿಣ್ಕ ಮಿಣ್ಕ ಹೊಳ್ವಿದೆ. ಅಲ್ಲವ್ವ.. ಈ ನವಿಲ್ಗೆರಿ ಹೇಂಗೆ ಮೊರಿ ಹಾಕುದು ಹೇಳ್... ಕೆಳಗೆ ಅಣ್ಣಿ ಹೇಳ್ತ್.. ಅವನಕ್ಕಲೆನೂ ಒಂದು ಗೆರಿ ಇತ್ತ್‌ಗಡ ಅದರ ಅಂವ ಪುಸ್ತಕ ಸೆರೆಲಿ ಇಸಿ ಸುಮಾರ್ ದಿನ ಕಳ್ದ್ ನೋಡ್ಕನ ಅದ್ ಮೊರಿ ಹಾಕಿತ್‌ಗಡ...! ಮತ್ತೆ ಅದ್‌ಮಿನಿ ಎಲ್ಯಾರ್ ಕೆಳಗೆ ಬಿದ್ದರೆ ಸತ್ತೇ ಹೋದೆಗಡವ್ವಾ..... ಅವ್ವಾ..... ಮಾತಾಡ್ ಇದ್ ಮೊರಿ ಇಸುದಾ ಇಲ್ಲೆನಾ ಹೇಳ್?"

ಸಾಲೆ ಬುಟ್ಟ್ ಬೆರಿ ಕಾಲ್ಲಿನಡ್ಕಂಡ್ ಎಣ್ಕೆ ಇಲ್ಲದೆ ನೆತ್ತಿಗೆ ಹೊಡಿವ ಉರಿಬಿಸ್ಲ್‌ಗೆ ಬೊಚ್ಚಿಕಂಡ್ ಬಂದ ಮಗಳ ಕುಸಿನ ಕಂಡ್ ಅಯ್ಯೆಗೆ ಅದರ ಬೇಜರ ಮಾಡಿಕೆ ಮನ್ಸಾತ್ಲೆ. ಒಮ್ಮೆ ಜೋರ್ಲಿ ಉಸ್ರ್ ಎಳ್ಕಂಡ್ "ಹೌದ್ ಕಂದಾ ಇದ್ ಮೊರಿ ಹಾಕಿದೆ. ಪಿಳ್ಳೆ ಒಡ್ಸಿದೆ. ಆದರೆ ಅದ್ ಯಾಗಾಂತ ಹೇಳಿಕೆ ಸಾದ್ಯಿಲ್ಲೆ. ನಾಳೆ, ನಾಳ್ದ್, ತಿಂಗ, ವರ್ಷ ಸುಮಾರಾದು. ಅದ್ಕೆ ಅದರ ಲ್ಯಾಕನೋಡಿಕಂಡ್ ಅದ್ ಮೊರಿ ಹಾಕುದರ ಕಾಯುವಟ್ಟ್ ಸವ್ದಾನ, ಪುರ್ಸೊತ್ತ್ ಇರೊಕು. ಅಂಬೇರ್ಪು ಮಾಡಿಕೆ ಬೊತ್ತ್. ಈಗ ಒಂದ್ ಕೆಲ್ಸ ಮಾಡ್.. ಚೀಲ ಪುಸ್ತಗ ಇಸ್. ನಾ ಮೀನ್ತಲೆಗುದ್ದಿ ಉಪ್ನೆಣ್ಸ್ ಮಾಡ್ಯಿಸ್ಯಳೆ. ಹನೀಸ್ ಗಂಜಿ ಉಂಡ್ ಕೂಪುಗೆ ಹೋಗಿ ಒಂದೊಂದು ಹೊರೆ ಸೌದೆ ಚೆಂಬ್ರು ಹೊತ್ಕಂಡ್ ಬರನೊ ಆಕಿಲೆನಾ....?"

ಅಯ್ಯೆನ ಮಾತ್ ಗೂಡೆಗೆ ಎಟ್ಟ್ ಅರ್ಥಾತೋ ಗೊತ್ತ್ಲೆ. ಬರ್ದ್ ಮುಗ್ದ ಒಂದ್ ಹಳೇ ಪುಸ್ತಗದೆಡೆಲಿ ನವಿಲ್ಗೆರಿನ ಇಸಿ ಅದ್ಕೆ ತಿಂಬಕೇಂತ ಸಣ್ಣ ಸಣ್ಣ ಕಾಗದ ತುಂಡುನ ಹರ್ದಾಕಿ ಮೊಡ್ಸಿಸಿ ಅಯ್ಯೆನೊಟ್ಟಿಗೆ ಹೊರ್ಟತ್.

ಹುಟ್ಟ್‌ಕಾಕನನೇ ದರಿದ್ರನ ಎಳ್ಕಂಡ್ ಭೂಮಿಗೆ ಬಿದ್ದ್ ಕಷ್ಟಪಟ್ಟ್ ಏಳ್ನೇ.. ವರೆಗೆ ಮುಟ್ಟಿದ ಬಾನು ಗೂಡೆ ಇದ್ದ ಎರ್ಡ್ ಜೊಡಿ ಲಂಗ ರೌಕೆಲಿ ವಾರ, ತಿಂಗ, ವರ್ಸಕಳ್ದ್ ಯಾರೋ ಓದಿಬುಟ್ಟ್ ಓದಿಕಾಗದ ಹಳೇ ಪುಸ್ತಕ, ಚಪ್ಪಲ್ ಕಾಣದ ಕಾಲ್, ಒಣ್ಗಿದ ಕುದಲ್‌ನ ಬಿಗ್ದ್ ಕಟ್ಟಿಕೆ ಅಯ್ಯೆನ ಹರ್ದ ಸೀರ್ಚೆಲ್ಲ್, ತಂಗೀಸ್ ಚೀಲದೊಳಗೆ ಬೊದ್ಕಿಕೆ ಬೊಳ್ಪು ಕೊಡಿಕೆ ಬಣ್ಣದ ಕನ್ಸ್‌ಗಳ ಕಾಂಬಕೆ, ಜೂಂಚಿಲ್ಲದೆ ಪೆನ್ಸಿಲ್‌ಗೆ, ನೂರ್ಪುಟದ ಖಾಲಿ ಪುಸ್ತಗ....! ಅದರೊಟ್ಟಿಗೆ.... ಬಿಸ್ಲ್ ಹೊಡೆದಾಂಗೆ ಸೋಗೆ ಮಾಡ್ನ ನೆರ್ಕೆಬಾಗ್ಲ್‌ನ ಬಿಡಾರ.

ಮಳೆ ಬಂದರೆ ದೊರೋಂತ ಒಳೆಗೆ ಸೋರ್ವನೀರ್... ದಿನ ಬೊಳ್ಪಾದರೆ ಅಪ್ಪಂತ ಹೇಳ್ವ ಜಿವಾದಿ... ಯಾರರ ಮನೆಗೋ ಕೂಲಿ ಚಾಕ್ರಿಗೆ ಹೋಗಿ ಕತ್ತಲ್ಯಾಕನ ಮೂಕ್‌ಮುಟ್ಟ ಕುಡ್ಕಂಡ್, ಬೀಸರ ಬೀಸರ ಎಡ್ಗ-ಬಡ್ಗ ಬಂದ್; ಹೆಣ್ಣ್‌ಗೆ ತಾಳಿಕಂಟಿ ಕಟ್ಟಿದ ಕೈಂದಳೇ ಜುಟ್ಟ್ ಬೊಗ್ಗ್‌ಸಿ ಹೊಡ್ದ್, ಮಗಳಿಗೂ ಬಾಯಿಗೆ ಬಂದಾಂಗೆ ಬೇಡಾದ್ ಬೊಯ್ದ್, ನೂಕ್ಯಾಕಿ ಒಂದ್ ಮೂಲೆಲಿ ಸುರ್ಂಟ್ಟಿ ಬಿದ್ದರೆ... ಒಳ್ದ ಎರ್ಡ್ ಜೀವಂಗ ಉಪಾಸ..!

ಇತ್ತ ಅಯ್ಯೆ ಯಾರಾರ ಮನೆಗೋ ಬೊಡ್ಡ್‌ಕತ್ತಿ ಚೆಲ್ಲ್ ಮೊಡ್ವಳೆ ತಕಂಡ್ ಹೋದರೆ ಉಟ್ಟು... ಇಲ್ಲರೆ ಬೆನ್ನ್‌ಗೆ ಅಂಟಿದ ಹೊಟ್ಟೆಗೆ ತೆಣ್ಣೀರ್‌ನೇ ಗೆತಿ. ದಿನಂಗ ಹೋತನೇ ಇದ್ದೊ... ದಿನ, ವಾರ, ತಿಂಗ ವರ್ಸ ಕಳೆತನೇ ಉಟ್ಟು... ಅಯ್ಯೆ ಅಲ್ಲಿ ಇಲ್ಲಿ ಕೂಲಿ ಮಾಡಿ, ರಜೆ ಇರ್ಕನ ಬಾನು ಗೂಡೆನ, ಅಡ್ಕೆ ಹೆರ್ಕಿಕೆ, ಬೀಜ ಹೆರ್ಕಿಕೆ ಕಳ್ಸಿ, ಹನೀಸ್ ಕೂಡ್ಸಿಸಿ... ಏಳ್ ಪಾಸಾಗಿ, ಎಂಟಾಗಿ, ಒಂಬತ್ನೆಲಿರ್ಕನೊಂದಿನ ಹಿಂಬೊತ್ತ್ ಸಾಲೆ ಬುಟ್ಟ್ ಬಂದ್... "ಅವ್ವಾ... ನಮ್ಮ ಸಾಲೆಂದ ಎಲ್ಲೊವ್ರ ಲಿಂಗರಾಜನ ಅರಮನೆಗೆ ಪಿಕ್ನಿಕ್ ಕರ್ಕಂಡೋದವೆ ಗಡ. ಅವ್ವಾ...... ಎಲ್ಲೊವೂ ಹೋದವೆ... ನಾನೂ ಹೋನೆ" "ದುಡ್ಡು ಎಷ್ಟ್ ಕೊಡಕಡ ಮಗ..." "ಅವ್ವಾ ಜೀಪುಗೆ ನಲ್ವೊತ್ತುರ್ಪಾಯಿ ಮತ್ತೆ ಖರ್ಚಿಗೆ ಇಪ್ಪತ್ತುರ್ಪಾಯಿ ಸಾಕಡ..! ಎಂತಮಾಡ್ದವ್ವಾ...? ಅಯ್ಯೆ ಅಲೋಚನೆ ಮಾಡ್ತ್ ಗಂಡ್‌ಸ್‌ನೊಟ್ಟಿಗೆ ಕೇಳಿಕೆ ಇಲ್ಲೆ. ಅದ್ ಕೊಡುವ ಸಾಮಾನೂ ಅಲ್ಲ. ದಾಸ್ಮೆ ಡೊಬ್ಬಿಲಿ ಕೂಡ್ಸಿಸಿದ ಪಾವುಲಿಗಳ ಲೆಕ್ಕ ಮಾಡ್ರೆ ಇನ್ನೂ ಮೂವತ್ತುರ್ಪಾಯಿ ಕಮ್ಮಿತ್ತ್" ನೆರೆಕರೆವರೊಟ್ಟಿಗೆ ಕೇಳಿಕೆ ಸುಮ್ಮಂಗಾದೆ.. ದೆವ್ವಕ್ಕೇಂತ ಬೆಣ್ತೆಕ್ಕಿ ತಿನ್ಸಿ ಮುಳ್ಳೆತೆರ್ದ್ ಬುಟ್ಟ ಹೇಂಟೆಕಡ್ತನ ಮಾರಿ;"ದೇವ್ರಿಗೆ ದೇವ್ರೆತ್ತ್‌ಸಿರೆ ನನ್ನ ಮಗಳೇ ಹರ್ಕೆ ತೀರ್ಸುದು ತೇಳಿ ಸಿಕ್ಕಿದ ದುಡ್ಡುಲಿ ಮಗಳ ಪಿಕ್ನಿಕ್‌ಗೆ ಕಳ್ಸ್‌ಕನ ಅಪ್ಪ ಎಲ್ಲಿತ್ತೊ ಗೊತ್ತ್‌ಲೆ... "ಯಿಂದನೇ ಗೂಡೆ ಬಾಕನ ಹೋಸೇಪುನೂ... ಒಂದ್‌ಕಟ್ಟ್ ಬೀಡಿನೂ ತಕಂಡ್ ಬಾ ಬಲ ತೇಳಿ" ತೋರ್ತ್ ಸೆರೆಲಿ ಸೆಕ್ಕ್‌ಸಿ ಇಸಿದ ಹತ್ತುರ್ಪಾಯಿ ನೋಟ್ನ ಕೊಡ್ಕನ "ತಕಂಬಡನೇ ಆಕಿಲೇಂತೇಳ್... ಈ ಗಂಡ್ಸ್ ಸಾಯೆಲಿ ಬೀಡಿ ಎಳಿಯದೆ ದೊಂಡೆ ಕಟ್ರೆಕಟ್ಟಲಿ ನೀ ಹೋಗು" ಅಂತ ಅಯ್ಯೆ ಹೇಳ್ಕನ.... ಆದ ಅಪ್ಪನಯ್ಯೆನ ಉರ್ದಪತ್ತನ... ಬುಡ್ಸಿ, ಬಂದ ಅಳ್ಗೇಲ್‌ನ ತಡ್ಕಂಡ್ ಹೋದ ಗೂಡೆಗೆ ಎಲ್ಲಿ ಹೋಗಲಿ ಎಲ್ಲಿ ಬರ್ಲಿ ನೆಮ್ಮೊದಿ ಇಲ್ಲೆ. ಎಲ್ಲಿ ಅಪ್ಪಂಗಯ್ಯೆಗೆ ಲಡಾಯಿ ಹತ್ತಿ ಹೊಡ್ಕಂಡವೇಂತ...!

ಹೀಂಗಿರ್ಕನ ಒಂದಿನ ಮಟಮಟ ಮದ್ಯಾಹ್ನ... ಶಾಲೆಂದ ಟೀಚರ್‍ನ್ಯೂ... ಎರ್ಡ್ ಗೂಡೆಗಳೂ ಬಾನು ಗೂಡೆನ ಕರ್ಕಂಡ್ ಮನೆಗೆ ಬಾಕನ ಹೆತ್ತಯ್ಯೆನ ಕರ್ಲ್ ಚುರ್ಕುಟ್ಟಿ ಹೇಳ್ತ್ ಮಗ ದೊಡ್ಡದಾಗುಟ್ಟುಂತ...! ಸೀದಾ ಗಂಡಾಂತೇಳುವ ಜಿವಾದಿನ ಹುಡ್ಕೆಂಡ್ ಹೋತ್. ಆದರೆ ಅಂವ ಪೊತ್ತೇ ಇಲ್ಲೆ. ಮಗಳ ತಲೆಗೆ ನೀರ್‌ಹೊಯೆಕೆ ಹೆಮ್ಮಕ್ಕಳೇ ಆಕು.

ಹಸ್ಯಕ್ಕಿ ಮಾಡೊಕು. ಬಿಡಾರಕೆ ಬಂದೊವ್ಕೆ ಒಂದ್ ಗಲಾಸ್ ಕುಡೆಕೆ ಮಾಡಿಕೊಡಿಕೆ ಹನಿ ಸಕ್ಕರೆನೂ ಇಲ್ಲೆ. ಕಣ್ಣೀರ್ ಭೂಮಿಗೆ ಬೀತ್. ಬೊದ್ಕುನ ಸಂಕಟಗಳ ನೆನ್ಸಿಕಂಡ್ ಹಾಂಗೂ ಹೀಂಗೂ ನಾಕ್‌ಜನನ ಬಾಕೇಳಿ ಗೂಡೆನ ತಲೆಗೆ ನೀರೊಯ್ಸಿತ್.

ಹಿಂಬೊತ್ತಾಕನ ಬಂದ ಜಿವಾದಿನೊಟ್ಟಿಗೇಳ್ರೆ ಅವಂಗೆ ಸಂಗತಿನೇ ಅರ್ತಾತ್ಲೆ. ಗೂಡೆ ಯಾಗೋಳ್ ಅಟ್ಟೇ ಓದುದರ್ಲಿ ಬಾರೀ ಚುರ್ಕ್. ಸಾಲೆಲಿ ನಡಿವ ಯಾದೇ ಚಟ್ಪಟಿಕೆಗ ಇರ್ಲಿ.. ಅದರ ಹೆಸ್ರ್ ಮುಂದೆ ಇರ್ತಿರ್. ಒಂದಿನ ಅಯ್ಯೆನೊಟ್ಟಿಗೆ ಕೇಳ್ತ್... "ಅವ್ವಾ ಈ ನವಿಲ್ಗೆರಿ ಯಾಕಿನ್ನೂ ಮೊರಿ ಹಾಕಿತ್ಲೆ. ಹಾಕುಲ್ಲೆನಾ ಹೇಂಗವ್ವಾ...?"

"ಹಾಕಿದೆ ಮಗಾ ಖಂಡಿತಾ ಒಂದಲ್ಲೊಂದಿನ ಖಂಡಿತಾ ಹಾಕೇ ಹಾಕಿದೆ. ಅಲ್ಲಿವರೆಗೂ ಪಾರಕುದ್ರೊಕು."

"ಏನೊಪಾ... ನೀ ಸುಳ್ಳೇಳ್ದೇ ಅಗಿರೊಕು" "ಸುಳ್ಳಲ್ಲ ಮಗಾ ನೀ ಬೇಕರೆ ನೋಡು ಮೊರಿ ಹಾಕಿದ ಮೇಲೆ ನೀ ಎಟ್ಟ್ ಕುಸಿಪಟ್ಟಿಯಾಂತ...!"

ಇತ್ತ ಅಪ್ಪಾಂತೇಳುವ ಜೀವಕ್ಕೆ ಸಂಸಾರ ಹೆಸ್ರ್‌ಗೆ ಮಾತ್ರ, ಹೊಡಿ ಚಿಲ್ರೆನ ಮಗಳ ಕೈಗೆ ಕೊಟ್ಟ್ "ಹಿಂಬೊತ್ತ್ ಸಾಲೆಂದ ಬಾಕನ, ಬೀಡಿ ತಕಂಡ್ ಬಾ, ತೊಟ್ಟೆ ತಂಬ; ಒಣ್ಗಿಲ್ ಮೀನ್ ತಕಂಡ್ ಬಾ ಬಲ"ತೇಳ್ರೆ ತಕಂಡ್ ಬರೋಕೇ... ತರದಿದ್ದರೆ ತಲ್ಲುಟ್ಟು ಮೇಲೆ ಕೈ ಇರ್ತಿತ್. ಒಂದಿನ ಎಲ್ಲೋ ಕುಡ್ದ್ ತಲೆನೇಚಿಕಾಗದೆ ಮಾರ್ಗದ ಕರೆಲಿ ಕಂಪರ ಬಿದ್ದದರ ಕಂಡ ಸಾಲೆ ಮಕ್ಕ ಹೇಳ್ತಿದ್ದೋ "ಬಾನುನ ಅಪ್ಪ ಕುಡಿದು ರೋಡಲ್ಲಿ ಬಿದ್ದಿದ್ರು...!" ಈ ಮಾತ್ ಕೇಳ್ದ ಗೂಡೆ ಮತ್ತೆ ಎರ್ಡ್‌ದಿನ, ನಾಚಿಕೆ, ಅವಮಾನ ಬೇಜರಲಿ ಸಾಲೆ ಕಡೆಗೆ ತಲೆ ಹಾಕಿತ್ಲೆ. ಅಂತೂ ಅಕೇರಿಗೆ ಎಸ್ಸೆಲ್ಸಿ ಪಾಸ್ಟೈಲ್ ಬಂದರೆ ಬಾನು ಗೂಡೆ ಇಡೀ ಜಿಲ್ಲೆಗೇ... ಪಸ್ಟ್ ಬಂದಿತ್ತ್...! ಅಯ್ಯೆಗೆ ಕುಷಿಆತ್. ಮಗಳ ತೊಬ್ಬಿಕಂಡ್ ಮರ್ಟತ್. "ಅವ್ವಾ ಇಂದಾರ್ ನವಿಲ್ಗೆರಿ ಮೊರಿ ಹಾಕುದಾ...?" ಬಾನುನ ಜೀವ ಎಳಿವ ಪ್ರಶ್ನೆಗೆ ಅಯ್ಯೆನ ಹಾಕುದು... ಪಾರಾ ಕಾಯುಕು.... ತೇಳುವ ಮಾಮೂಲು ಉತ್ತರ.

ಇಡೀ ಜಿಲ್ಲೆಗೆ ಪಸ್ಟ್ ಬಂದ ಬಾನು ಗೂಡೆಗೆ ಸಮ್ಮಾನ ಮಾಡಿ ಅಭಿನಂದನೆ ಹೇಳ್ವ ಜಂಬರನ ಸಾಲೆಲಿ ಮೊಡ್ಗಿಕಂಡಿದ್ದೊ. ಸಂಗತಿ ಕೇಳ್ದ ಅಪ್ಪ "ನಾನೂ ನಿಮ್ಮ ಸಾಲೆಗೆ ಬನ್ನೇಂತ ಹೇಳ್ತ್." ಎಂತರ ಮಾಡ್ದು...; ಹೆತ್ತಪ್ಪನ ಬ್ಯಾಡಾಂತೇಳಿಕೆ ಮನ್ಸಾಗದೇ "ಬನ್ನಿಂತೇಳಿ" ಹೊರ್ಡಿಸಿ ಕರ್ಕಂಡ್ ಹೋತ್. "ಎಲ್ಡ್ ಮಿನಿಟ್ ನಿತ್ತ್‌ಕಮಗ... ಒಂದ್ ತೊಟ್ಟೆಕುಡ್ಕಂಡ್ ಬನ್ನೇ" ಅಂತ ಮಾರ್ಗದ ಕರೆಲಿ ಟರ್ನ್‌ನ ಮೇಲ್ಟೈ ಒರ್ಬರೆಲಿದ್ದ ಸರಾಯದ ಗುತ್ತಿಗೆಗೆ ಹೋಕನ ತಡ್ದ ಗೂಡೆ.... "ಅಪ್ಪ ಈಗ ಬ್ಯಾಡಪ್ಪಾ... ಬಾಕನ ಕುಡಿನಿ...ಯಿಂದನಿ ಅಲ್ಲಿಗೆ ಎಲ್ಲೋವು ಬಂದವೇಂತ ಕೈ ಹಿಡ್ಕಂಡ್ ಎಳ್ಕಂಬೊದರ ನೋಡಿ ದಾರಿಲಿ ಹೋಗೊವೆಲ್ಲ

ಪಿಸಿ, ಪಿಸಿ ಹಲ್ಬುಡ್ತಿದ್ದೊ. ಗೂಡೆಗೆ ನಾಚಿಕೆ, ಬೇಜರ ತಡಿಯಕೆ ಆಗದೆ ಮರ್‍ಟೇಬುಡ್ತ್. ಸಾಲೆಗೆತ್ತ್‌ಕನ ಅಂವ ಹದಮೋರಿ ಬೆಗ್ರ ಅರ್ಸಿಕಂಡ್ ಹಣ್ಣಾಗಿತ್ತ್. ಹಕ್ಕಲೆ ಕುದ್ದ ಕೆಲೊವು ಮಕ್ಕ ಅಂಡ್ಯಂಡಿ ಬೇಂಚಿ ತಲೇಗೆ ಬಂದಿದ್ದೊ.

ಅಂತೂ ಊರ್‍ನ ಕೆಲೊವು ಸಂಘ ಸಂಸ್ಥೆಗ, ಶಾಲೆನ ಮಾಸ್ಟ್ರ‍ಗ, ಟೀಚರ್ ಎಲ್ಲ ಸೇರಿ ಬಾನುನ ಕಾಲೇಜಿಗೆ ಬೇಕಾದ ಪುಸ್ತಕ, ಪೀಸ್, ದುಡ್ಡು, ಬಟ್ಟೆಬರೆ ಎಲ್ಲ ಕೊಡ್ಸಿ, ಸಮ್ಮಾನ ಮಾಡಿ, ಕೊಲರ್ಷಿಪ್, ಒಳಿಯಕೆ ಹಾಸ್ಟೆಲ್‌ನ ಯವಸ್ಥೆ ಎಲ್ಲ ಮಾಡಿಕೊಟ್ಟ್ ಗೂಡೆನ ಮುಂದೆನ ಭೌಷ್ಯಕ್ಕೆ ಎಲ್ಲ ಅನ್ಕೂಲನೂ ಮಾಡಿಕೊಟ್ಟೊ.

ಗೂಡೆ ಮನೆಗೆ ಬಂದಾಂಗೆ ಅಯ್ಯೆನ ಕಾಲಿಡ್ದ್ "ಅವ್ವಾ... ನಂಗಿಂದ್ ತುಂಬಾ ಕುಷಿ ಆವ್ತು. ಕಾಲೇಜಿಗೆ ಹೋಕೆ ಎಲ್ಲಾ ಯವಸ್ಥೆನೂ ಮಾಡಿಕೊಟ್ಟೊಳೊ. ಇಂದಾರ್ ನವಿಲ್ಗರಿ ಮೊರಿ ಹಾಕುದ ಅವ್ವಾ....? ಅಯ್ಯೆಗೆ ಮಗಳ ಕುಷಿನ ನೋಡಿ; ಅದರ ಕುಷಿಗೆ ಕಾರಣಾದವರ ಮನ್ಸ್‌ಲೇ ನೆನ್ಸಿ ಅವ್ಕೆಲ್ಲಾ ಒಳ್ಳೆದಾಗಲೀಂತ ಬೇಡಿ ದೇವ್ರಪಟಕ್ಕೆ ನೆಣೆಬೊತ್ತಿ ಹೋಸಿಸಿ ಕೈಮೊಗ್ತ್.

ಸೂರ್‍ಯ ದೇವ್ರುನೂ ಚಂದ್ರದೇವ್ರುನೂ ದಿನಾ ರಾತ್ರೆ ಬಂದ್ ಹೋತಿದ್ದೊ.... ಬಾನು ಕಾಲೇಜಿಗೆ ಸೇರ್‍ತ್. ಅಲ್ಲಿನೂ ಒಳ್ಳ ಹೆಸ್ರ ತಕಂತ್. ಎಲ್ಲ ಆಟ, ಓಟ, ಪಾಠಲೂ ಮುಂದೆ ಬಾತ್. ಒಂದಿನ ಸನಿವಾರ ಮದ್ಯಾಹ್ನ ಮನೆಗೆ ಬಾಕನ ತಂದಿಸಿದ ಮೀನ್‌ನ ಕೊತ್ತಿ ಕಚ್ಚಿಕಂಡ್ ಹೋಗ್ತುತೇಳ್ವ ಸಂಗ್ತಿಲಿ ಅಪ್ಪಂಗಯ್ಯೆಗೂ ಲಡಾಯಿ ಹತ್ತಿ ಉರ್ಡಪತ್ತ ಸುರಾಗ್ತ್. ಅಪ್ಪನ ಕಾಲ್ ನೆಲಲಿಮಿನಿ ನಿಲ್ತಿತ್ಲೆ. ಬಾನು ಗೂಡೆ ಯಾಗೋಳುನಾಂಗಿತ್ಲೆ...! ಸೀದಾ ಹೋಗಿ ಅಯ್ಯೆನ ಕೈ ಹಿಡ್ಕಂಡ್ ಕರೆಗೆ ನಿಲ್ಸಿ.. ಅಪ್ಪನಕ್ಕಲೆ ಹೋಗಿ ಕಣ್ಣ್ ಹೊರ್ಡ್ಸಿ ಹೆದರ್ಸಿ "ಇದಿಯೇ ಸುರು, ಇದಿಯೇ ಕಡೆ. ಇನ್ನ್‌ಮುಂದೆ ಹೆಂಡಕುಡ್ದ್ ಬಂದರೆ ನೀವ್ಗೆ ಇಲ್ಲಿ ಜಾಗೆಲ್ಲೆ. ಹುಟ್ಟಿದಲ್ಲಿಂದ ಇಲ್ಲಿವರ್ಗೆ ಕಣ್‌ನೀರ್‍ಲಿ ಕೈ ತೊಳ್ಕಂಡ್ ಸೈಸಿಕಂಡಿದ್ದೊ. ನೀವೂ ಬೊರ್ಕತ್ತಾತ್ಲೆ. ನಮ್ಮನ್ನೂ ಬೊರ್ಕತ್ತಾಕೆ ಬುಡ್ದುಲೆ. ಇನ್ನ್ ಹಾಂಗಲ್ಲ. ಸರಿದ್ದರೆ ಸೇರಿ; ಒಳ್ಳ ಮಾತ್ಲಿ ಹೇಳ್ತಾ ಒಳೆ. ಸರ್‍ಯಾಗಿ ನೋಡಿಕಂಡ್ ಸಾಂಕಿಕೆ ಬೊತ್ತದಿದ್ದರೆ, ನೀವ್ಗೆ ಮೊದ್ವೆಯಾಕೆ ಬೇಕಾಯ್ತ್, ಹೆಣ್ಣ್, ಮಕ್ಕ, ಸಂಸಾರ, ನೆರೆಕರೆ ನಂಟ್ರ‍ಗ ಯಾಕ್ಬೇಕು. ಒಬ್ಬಂಗೆ ಇರಕಾಯ್ತುಲ್ಲ. ಇಟ್ಟ್ ದಿನ ಮೊರ್‍ಯಾದಿ ಕೊಟ್ಟ್ ಬೊದ್ಕ್ಯೊಳೊ. ನೀವ್ಗೂ ಒಳ್ಳ ಹೆಸ್ರ ತಂದ್ ಕೊಟ್ಟಳೆ. ಆದರೆ ನೀವೇನ್ ಕೊಟ್ಟರಿ. ಸಾಕ್ ಇಷ್ಟ್ ಕಾಲ ನರ್ಕ ಬಂದದ್. ಸರಿದ್ದರೆ ಅಪ್ಪ.... ಇಲ್ಲದಿದ್ದರೆ ನಿಮ್ಮ ದಾರಿ ನೀವ್ಗೆ. ನಮ್ಮ ದಾರಿ ನಾವ್ಗೆ. ಹೊಡಿದು, ಬೊಡಿದು ಇಂದ್ಗೆಮುಗ್ತ್. ಆ ಕಾಲಕಳ್ತ್. ಇನ್ನಾರ್ ನಾಕ್ ಜನರ ನೋಡಿ ಬೊದ್ಕು ಹೇಂಗೇಂತ ತಿಳ್ಕಂಡ್ ಬೊದ್ಕಿಕೆ ಕಲಿನಿ. ನಡ್ಯವ್ವಾ... ನಾವೆಲ್ಲಾರ್ ಪೋಯಿ ನಿನ್ನ ಹೇಂಗೆ ಸಾಂಕೊಕುತ

ನಂಗೆ ಗೊತ್ತುಟ್ಟು." ಮಗ್ಳ ಮಾತ್ ಕೇಳ್ದ ಅಪ್ಪನ ಹೆಂಡದ ಪೌರು ಪುರ್ರsss ಇಳ್ದೋತ್. ಮಾತಾಡಿಕೆ ಏನೂ ಬಾಯಿ ಬರದೆ ತಲೆ ಅಡಿಗೆ ಹಾಕ್ಕಂಡ್ ಸುಮ್ಮಂಗೆ ಕುದ್ದತ್. ಇತ್ತ ಮಗಳ ಕಿಚ್ಚಿಕಿಡಿನಂಥಾ ಮಾತ್ಕೇಳ್ದ ಅಯ್ಯೆ ಕರ್ದ್ ಹೇಳ್ತ್, "ಸಬಾಸ್ ಮಗ... ಇನ್ನ್ ನಿನ್ನ ನವಿಲ್ಗರಿ ಯಾಗೊಳು ಮೊರಿ ಹಾಕುಲ್ಲೆ...!! ಬೇಜರ ಆಗ್ಬಡ.. ಅದ್ ಯಾಗೊಳು ಮೊರಿ ಹಾಕಿಕೆ, ಮೊಟ್ಟೆಸಿಕೆ ಸಾದ್ಯಇಲ್ಲೆ. ಅಂದ್ ನೀ ಪುಸ್ತಕ ಸೆರೆಲಿಸಿದ ಗೆರಿ ನಿಂಗೊತ್ತಿಲ್ಲದಾಂಗೆ, ಏಳ್ನೆಲಿ, ಎಸ್ಸೆಲ್ಸಿಲಿ ಕಾಲೇಜ್‌ಲಿ ಎಲ್ಲ ಕಡೆ ನಿನ್ನ ಸಾಧನೆ ರೂಪಲಿ ಮೊರಿ ಹಾಕಿಟ್ಟು...! ಅಂದ್ ನಿಂಗೆ ಸಣ್ಣ ಪ್ರಾಯ. ಮಕ್ಕಳಾಟ, ಬುದ್ಧಿ ಬಂದಿತ್ಲೆ. ಅಲ್ಲಿ ನಿನ್ನ ಮನ್ಸ್‌ನ ಭಾವನೆ, ಬೊದ್ಕು, ಆಸೆ, ಕನ್ಸ್ ಎಲ್ಲ ಇತ್ತ್. ಅದರ ಹಾಳ್ಮಾಡಿಕೆ ನನ್ನ ಮನ್ಸೊಪ್ಪಿತ್ಲೆ. ಅದ್ಕಾಗಿ ಒಂದ್ಸುಳ್ಳು ಹೇಳ್ದೆಷ್ಟೇ..! ಈಗ ನಿಂಗೆ ಲ್ಯಾಕ ಬುದ್ಧಿ ಬಂದುಟ್ಟು. ಬೊದ್ಕುಲಿ ಏನಾರ್ ಮಾಡ್ವೇ ತೇಳ್ವ ಛಲ ಉಟ್ಟು. ಅನ್ಯಾಯ ಆದರೆ ಹೋರಿಕ್ಕಂಡ್ ಗೆದ್ದ್ ತೋರ್ಸುವ ಶಕ್ತಿ ಬಂದುಟ್ಟು..! ಇನ್ನ್ ಆ ನವಿಲ್ಗರಿ ಪುಸ್ತಗದೊಳಗೆ ಉಸ್ರ್‌ಕಟ್ಟಿ ಮುದ್ದೆ ಆದು ಬೇಡ. ಹೊರೆಗೆ ತೆಗ್ದ್ ಆ ಮೂಲೆಲಿ ಕಾಂಬ ದೇವ್ರ ಪಟಕ್ಕೆ ಸೆಕ್ಕ್‌ಸಿಸ್. ಬೀಸ್ವಗಾಳಿಗೆ ಅತ್ತಿತ್ತ ಒಚ್ಚಿಕಂಡ್ ನಿನ್ನ ಎಳ್ತ್‌ನ ಮಕ್ಕಳಾಟಕ್ಕೆ ಕಳ್ದದಿನಂಗಳ ನೆಂಪು ಮಾಡಿಕಂಕೆ ಗುರ್ತಾಗಿರ್ಲಿ." ತೇಳಿ ಮಗಳ ತೊಬ್ಬಿಕಂಡತ್ತ್. ಬಾನು ಗೂಡೆ ಏನೋ ಸಾಧನೆ ಮಾಡ್ದ ಕುಷೀಲಿ ಅಯ್ಯೆನ ತೊಡೆಮೇಲೆ ತಲೆಸಿತ್.

***

# ಉಪ್ಪುರ್ಕೆ ಮನೆ

"ಡಂಗ್ರ...ಟಕ್ರ...ಡಂಗ್‌ರ ಟಕ್‌ರ...." ಮಾರ್ಣೆಮಿಲಿ ಹುಲಿಯಾಸದೊವು ಜಾಲ್‌ಲಿ ಚೆಂಡೆ ಪೆಟ್ಟಿಗೆ, ಬೊಚ್ಚಿಕಂಡ್, ಬಣ್ಣ ಬೊಳ್ಕಂಡ್ ಬೊಗ್ಗಿಹೋದ ಸರ್ರದೊಟ್ಟಿಗೆ ಹಜ ಹಾಕ್‌ತಿದ್ದರೆ... ಇತ್ತನ ಪುಡೆ ಯಜ್ಮಾನನೂ ಯಜ್ಮಾಂತಿನೂ ಕರಿಮರದ ಪೀಠಲಿ ಕಾಲ್ಮೇಲೆ ಕಾಲಾಕಿ ಕುದ್ಕಂಡ್ ಕಂಚ್ನಹರ್ವಾಣಂದ ಅಡ್ಕೋಳು ತೆಗ್ದ್, ಪಂಚೋಳೆಲೆಗೆ ಕರ್ಡಿಗೆಂದ ಬೆಣ್ಣೆನಾಂಗಿದ್ದ ಸುಣ್ಣನ ಕೊಡಿಬೆರ್ಲ್‌ಲಿ ಪೂಜಿ ಮೊಡ್ಸಿ ಬಾಯ್ಗಾಕಿ ಕಾಲ್ಕೊಣ್ಸಿಕಂಡ್ ಕುಸಿಪಡ್ತಿದ್ದೊ. ಆ ಬೇಯ್ವ ಬಿಸ್ಲ್‌ಲಿ ಕೊಣ್ದಾದ ಮೇಲೆ ಹಿಂಡ್‌ನ ಗಂಡ್ ಬಂದ್ "ಬೂರೊಂಡೆ ಉಳ್ಳಾಯ... ಬೂರೊಂಡೆ ಉಳ್ಳಾಳ್ತಿ"ತೇಳಿ ಎರ್ಡ್ಡೂ ಕೈನ ಜೋಡ್ಸಿ, ಜೋಳಿಗೆ ಒಡ್ಡಿ ನಿಲ್ಲ್‌ಕನ ಯಜ್ಮಾಂತಿ ಒಳೆಗೆಂದ ತಂದ ಒಂದ್ಪಾವಕ್ಕಿನೂ, ಒಂದ್ಕಾಯಿ, ಎಂಟಾಣೆ ಪಾವ್ಲಿನ ಹಾಕಿ... "ಓ ಆಯೆಗ್ ಬೆರಿ ಬೊಗ್ಗಾತ್ ನಲಿಪ್ಪೆರೆ ದಾನೆ... ಸನ್ನಿನಾ..."ತೇಳಿ ಹೂಂಕರ್ಸಿ "ನಾಣ ಪೋವೊಳಿ"ತೇಳಿ ಕೈ ತೊಳ್ಕಂಡೊ.

ಅಳ್ದ ಊರ್ಗ್ಗೆ ಒಳ್ದವನೇ ಗೌಡ ತೇಳುವಾಂಗೆ ಸುತ್ತಮುತ್ತೊಳುನ ಹಳ್ಳಿ... ಐವತ್ತ್...ಅರ್ವೊತ್ತ್ ಬಿಡಾರಗಳಿಗೊಂದೇ ಉಪ್ಪುರ್ಕೆ ಮನೆ. ಹತ್ತೈವತ್ತ್ ಕಂಡಿ ಅಡ್ಕೆತೋಟ, ನೂರ್ನೂರೈವತ್ತ್ ಮುಡಿ ಬತ್ತದ ಗದ್ದೆ, ಐವೊತ್ತ್‌ನಡೆ ದನಕರ್‌ಗ. ಹಾಳಾಗಿ ಬಿದ್ದ್ ಲೆಕ್ಕಕ್ಕೆ ಸಿಕ್ಕದೇ ಹೋವ ಕಾಯಿಗ. ವಂಶಕ್ಕೊಂದೇ ಇರ್ವ ಪ್ಯಾಟೆಲಿ ಓದ್ವ ಗಂಡೈದ. ಕೈಗೊಂದ್ ಕಾಲ್ಗೊಂದ್ ಕೆಲ್ಸದೊವು. ಇಷ್ಟೆಲ್ಲಾ ಇದ್ದರ್ರೂ ಹರ್ದು... ಬೆರ್ಲ್‌ಗೆ ಒಂದ್ ಚಿಟ್ಕೆ ಉಪ್ನಕಲ್ಲ್ ಹಾಕದ ಜಾತಿಗ ಎರ್ಡ್ ಜಿವಾದಿಗ!

ಹಾಂಗೆಂತೇಳಿ ಯಜ್ಮಾನ್ರು ದಾನ ಧರ್ಮ ಮಾಡದೊವೂಂತರ್ತಲ್ಲ. ನೆರೆಕರೆ ಮಾಗಣೆವು, ದೂರದೂರ್ನೊವು ದೇವಸ್ಥಾನ ಚೊಂದೊಸುಲುಗೆ, ಅದ್ಕೆ, ಇದ್ಕೆ, ಕೇಳಿಕಂಡ್ ಬಂದರೆ ಅವ್ಕೆ ಅದಿದ್ ಹೇಳಿ ಹನೀಸ್ ಕೊಟ್ಟುಕಳ್ಸಿ ಮಾರ್ನೆದಿನನೇ ಗೋಡೆ ಮೇಲೆನ ಬೋರ್ಡುಗೆ ಹೆಸ್ರಾಕ್ಸುತಿದ್ದೊ. ನೆರೆಕರೆನ ಎಲ್ಲ ಹೆಣ್ಣಾಳ್‌ಗನೂ, ಗಂಡ್‌ಜನನೂ ಯಜ್ಮಾನ್ರ ಮನೆಲಿ ಗೇಯೆಕ್ಕಿದ್ದವೇ...! ಅವ್ಕೆಂತೇಳಿನೇ ಎರ್ಡ್ ಬೇರೆ ಬೇರೆ ಕೊಟ್ಟೆಗೆಗಳ ಯಜ್ಮಾನ್ರ್ ಕಟ್ಸಿದ್ದೊ. ಅವ್ಯಾರೂ ಉಪ್ಪುರ್ಕೆ ಮನೆನ ಮೆಟ್ಕಲ್ಲ್ ದಾಟುವಾಂಗಿಲ್ಲೆ. ಕುಡೆಕಾಕನ ನೀರ್ಮೊಜ್ಜಿಗೆ, ಮದ್ಯಾಹ್ನ ಗಂಜಿಗೊಂದು ಹೋಳುಗಳ ಕಾಣದ ಮೆಣ್ಸ್‌ನಾಂಬರ. ಕದ್ಯಕ್ಕಿಗಂಜಿ. ಕೆಲ್ಸ ಬುಟ್ಟಾಕನ ಹಿಂಬೊತ್ತ್ ಲೆಕ್ಕ ಚುಗ್ತ; ಒಂದ್‌ಕಾಯಿ, ಒಂದ್ಸೇರಕ್ಕಿ ದುಡ್ಡ್ ಕೊಟ್ರೆ ಪುಣ್ಯ. ಹೆಚ್ಚಿನಂಸ ಕೊಡೊವೇ ಅಲ್ಲ. ಆದರೂ ವಿಧಿ ಇಲ್ಲೆ. ಗೆಯ್ದರೆ ಮಾತ್ರ ಅವ್ಕೆ ಕತ್ತಲೆನ ಗಂಜಿ. ವೊರ್ಸದ ಬಿಸುಗೆ, ದೀಪಾವೊಳಿಗೆ ಎಲ್ಲ ಆಳ್ಗಳಿಗೂ ಒಂದೊಂದ್ ಚೊಡಿ ಬಟ್ಟೆ ಅವರ

ಮಕ್ಕಳಿಗೊಂದು ಅಂಗಿನೂ ಚೆಡ್ಡಿನೂ. ಆದರ್ನೂ ಒಮ್ಮೊಮ್ಮೆ "ಈ ವರ್ಸ ಅಡ್ಕೆ ಪಸ್ಲಿಲ್ಲೆ. ಭಾರೀ ಕಮ್ಮಿ, ನೀವ್ಗೆ ಎದೆಮುರ್ದ್ ಭೂಮಿಲಿ ಗೆಯ್ಯಕ್ಕೆ ಆಲ್ಲೆ. ಬರ್ವರ್ಸ ನೋಡನೊ" ತೇಳಿ, ಜಾರಿಕಂಬೊತ್ತಿದ್ದೊ. ಇದ್ ಬುಟ್ರೆ ಎಲಾಡ್ಕೆ ಚಪ್ಪುವ ಹೆಮ್ಮಕ್ಕ ಮಿನಿ ಎಲ್ಯಾರ್ ಬಿದ್ದಡ್ಕೆನ ಹೆರ್ಕಿ ಚೆಂಬಿಗಾಕಂಡದ್ ಗೊತ್ತಾದರೆ ಅವರ ಸಂಸಾರಕ್ಕೆಲ್ಲಾ ಬ್ಯೊಗಳ್ನ ಮಳೆ. ಒಂದಿನ ಕೀಲೆ ಮುರ್ದ್ ಬಿದ್ದ ಬೆಂಡನ ಕುಡ್ದದ್ ಗೊತ್ತಾಗಿ ಮಾರ್ನೆ ದಿನಂದಳೇ ಕರಿಮರದ ಪೀಠದ ಸಮೇತ ಯಜ್ಮಾಂತಿ ಕೆಲ್ಸದ ಗುಡ್ಡೆಗೆ ಹಾಜಿರ್...!

ಹೀಂಗೆನೇ ಸುಮಾರ್ ಮೂರ್ತಲೆಮಾರ್‌ಂದನೂ ಅಪ್ಪನ, ಅವರಪ್ಪನಪ್ಪನ ಕಾಲಂದಳೂ ಯಜಮಾನ್ರ ಮನೆಲೇ ಚಾಕ್ರಿ ಮಾಡಿಕಂಡಿದ್ದ ಕೇರಿನ ಹುಕ್ರ, ಬೆಳ್ಜಿರ್ ಕೋಳಿ ಕೂಂಗ್ವ ಹೊತ್ಲೇ ಬಂದ್ ಎತ್ತ್‌ಗಳ್ಗೆ ಹಲ್ಸನಕಾಯಿ ಮೊಡ್ಡಿನ ಬೇಸಿ ಹಾಕಿ ಚುಮ್ಮು ಚುಮ್ಮು ಸೆಳಿಗೆ ನೇಗ್ಲ್‌ನೊಂಞ ತಕಂಡ್ ಎತ್ತ್‌ಗಳ ಹೊಡ್ಕಂಡ್ ಹೋಗಿ ಆಳೆತ್ತರ ಚೋಳ್ ರಟ್ಟಿಸಿಕಂಡ್ ಬೊಯ್ಲ್‌ಗೇ ಕೇಳ್ವಾಂಗೆ ದನಿಕೊಟ್ಟ್‌ಕಂಡ್ ನಟ್ಟಮದ್ಯಾಹ್ನವರೆಗೆ ಹೂಡಿ ಎತ್ತ್‌ಗಳ ಮೀಸಿ ಮೇಯಕೆ ಕಟ್ಟಿ, ಮತ್ತೆ ಕಮ್ಮುನ ಬುಡ, ಚಾಳೆ ಬುಡ ಬಿಡ್ಸಿ, ಸೊಪ್ಪಾಕಿ ಹಿಂಬೊತ್ತ್ ಯಜಮಾನ್ರ ಸೇರಕ್ಕಿನ ಉಂಬುಳಿನ ಪಡೆತಿದ್ದವಂಗೆ; ಆ ದಿನ ಯಾಕೋ ಏನೋ ಗಾಳಕೆ ಹೋಗಿ ಮೀನ್ ಹಿಡೆಕುಂತ ನೆನ್ಸಿ ಮಾಡ್ಸರೆಲಿ ಸೆಕ್ಕಿಸಿದ್ದ ಹೊಗೆ ಹಿಡ್ದ ಸೆಳೆನ ಕೊಡಿಗೆ ಕಟ್ಟಿದ ಗಾಳನೂ ತಂಗೀಸ್‌ನೂ ಸರಿ ಮಾಡಿ ನೀರೋಡಿ ಹಕ್ಕಲಿದ್ದ ಚೋಳ್ರಾಸಿನ ಕತ್ತಿ ಮುಂಡಲಿ ಬೆದ್ಕಿ ನೊಕ್ಕುಳ್ ಹಿಡ್ದ್ ಮೊಣ್ಣಿದ್ದ ಗಂಡ್ ಚೆಪ್ಪಿಗೆ ಹಾಕಂಡ್, ತಲೆಗೊಂದು ಮೊಡ್ಪಳೆ, ಸೊಂಟಕ್ಕೊಂದು ಚುಡೋಂಕು ಕಟ್ಟಿಕಂಡ್, ಕಿಡ್‌ಂಜೋಳು ಸೂಂಡಿಕಂಡ್ ಹೊರ್ಟವಂಗೆ... "ಅಪ್ಪ ಯಾನ್ಲಾ ಈರೆನೊಟ್ಟಿಗೆ ಬರ್ಪೆ" ತೇಳ್ವ ಕೊಂಡಾಟದ ಮಂಜನ ಸೊರಕ್ಕೆ ಬ್ಯಾಡಾಂತೇಳಿಕೆ ಮನ್ಸಾಗದೆ ಕರ್ಕಂಡ್ ಹಳ್ಳದ ಕರೆಗೆ ಹೋತ್.

ಜಿರಿಕುಟ್ಟಮಳೆಗೆ ಗಾಳದ ಕೊಡಿಗೊಮ್ಮೆ ಕಾಂಕ್‌ರ್ಸಿ ಮಡೆಉಗ್ದ್, ನೊಕ್ಕುಳ್ ಚುರ್ದ್, ಬೊಗ್ಗಿವರ್ದ ಆದ ನಾಣೆಲ್ ಮರದಡಿನ ಗುಂಡಿಗೆ ಗಾಳ ಬುಟ್ಟ್ ಸೆಳೆನ ಕಾಲ್‌ಲಿ ಮೆಟ್ಟಿ ಹಿಡ್ಕಂಡ್ ಬೀಡಿ ಹೋಸಿ ಬುಸ್ಸss ದಮ್ಮು ಎಳ್ಕಂಡ್ ಡೆನ್ನ...ಡೆನ್ನಾನ ಹಾಟ್ಟನ ಹೇಳಿಕಂಡ್ಕಿಕನ ರಬಕ್ಕ.... ಕಚ್ಚಿದ ಮೂಡುಮೀನ್ನ ತಕಂಡ್ ಬಂದ್ ಬಿಡಾರಲಿ ಉಪ್ಪುಮೆಣ್ಸ್ ಹಾಕಿ ಬಾಯಿಚಪ್ಪುರ್ಸಿ ಹೊಡ್ದ್ ಮೊಲ್ಗಿದವಂಗೆ ಬೊಳ್ಪಿಗೆ ಎದ್ರ್‌ಕನ ಮಂಜನ ನರ್ಕಟ ಕೇಳಿ ಹಣೆ ಮೇಲೆ ಕೈ ಇಸಿದವಂಗೆ ಕಿಚ್ಚಿಮುಟ್ಟಿದಂತಾ ಅನ್ಬವ...!

ಜರ ನೆತ್ತಿಗೇರಿ ಹೋಗಿತ್ತ್. ಬುಟ್ರೂ ಬುಡಿಕಾಗದ ಕೆಂಪು-ಕೆಂಪಾದ ಕೇಪಳ ಹೂನಾಂಗಾದ ಎಳ್ತ್ ಕಣ್ಣ್‌ಗ. ಎಂತರ ಮಾಡ್ದು..? ಕೈಲಿ ಹೊಡಿ ಕಾಸಿಲ್ಲೆ. ಆ ಊರ್ಲಿ ಸಾಲೆನ ಮೆಟ್ಟತ್ತಿ ಬಂದ ಸುರೂನ ತೇನಸಿಂಗ್ ಹುಕ್ರೊಬ್ಬನೆ...! ಅಪ್ಪನ ಅಪಮುತ್ರ್ಯುಂದಾಗಿ

ಯಜಮಾನ್ರ ಮನೆಲಿ ಚಾಕ್ರಿಗೆ ಬಿದ್ದ್ ತನ್ನ ದರಿದ್ರಕ್ಕೆ ತಾನೇ ಶಾಪ ಇಸಿಕಂಡ್ ತಬ್ಬುರಿ ಕೂಸ್ನ ಹೇಂಗಾರ್ ಮಾಡಿ ಒಳ್ಳಿಸಿಕಣಕೂಂತೇಳಿ ಮನ್ಸ್‌ಗೆ ಬಂದ ನೂರ್ ದೆವ್ವಗಳಿಗೆ ಕೈ ಮುಗ್ದ್ ಚಾಮಿ ಕೊರ್ಗಜ್ಜನ ನೆನ್ಸಿಕಂಡ್ ಸೀದಾ ಯಜ್ಮಾನ್ರ ಮನೆಕಡೆಗೆ ಮಂಜನ ಹೊತ್ಕಂಡ್ ಹೊರ್ಟತ್.

"ಬೂರೊಂಡೆಉಳ್ಳಾಯ ಕೊಡೆಡ್ತ್‌ಇಂಚಿ.... ಬಾಲೆಗ್ ದಿಂಜss... ಜರ. ಪೇಂಟೆಗ್ ಪೋವೊಡು ಮರ್ದ್‌ನ ಕನವೊಡು. ಪನೀತ್ ಕಾಸಿತ್ತ್‌ಂಡ ಬೋಡಿತ್ತ್‌ಂಡ್"ತೇಳಿ ತಲೇಲಿದ್ದ ಸೀರ್ತುಂಡನ ಒಡ್ಡಿ ಕೈಮುಗ್ದ್ ನಿತ್ತ ಹುಕ್ರನ ಕಂಡ ಯಜ್ಮಾನ "ಹೇ... ಅದ್ಕೆ ಮೊದ್ದ್‌ಗಿದ್ದೇನೂ ಬ್ಯಾಡ... ಕಳ್ಳ ಜರ. ನಾನೇ ಮನ್ನೆ ತಂದ ಪಿಲ್ಸುಟ್ಟು ಅದರ್ನೇ ನೂಂಗ್‌ಸು"ತೇಳಿ ಯಾವನೋ ಕಾಲಲಿ ಯಾದೋ ಕಾಯ್ಲೆಗೆ ತಂದ ಎರ್ಡ್ ಪಿಲ್ಸ್‌ನ ಹೈದಂಗೆ ಕುಡ್ಸಿದೊ. ಪಿಲ್ಸ್ ಕುಡ್ಸಿ ಅರ್ಧಗಂಟೆಲೇ ಅದ್ ರಿಯಾಕ್ಷನ್ನಾಗಿ ಹೈದನ ಶರ್‍ರ... ಯಾಕೋ ಕೋಟಹತ್ತಿ ಕುದೆ ಆತ್. ಉಸ್ರ್ ನಿತ್ತೊತ್. ಜೀವ ಆಕಾಶಕ್ಕೆ ಸೇರ್ತ್.

ಕಣ್ಮುಂದೇನೇ ಮಂಜನ ಸಾವ್ನ ನೋಡ್ದ ಹುಕ್ರ ಎದೆ ಹೊಡ್ಕಂಡ್ ಮರ್ಡ್ಕೆ ಸುರುಮಾಡ್ತ್. ಜೀವನದ ಸರ್ವಸ್ವನೇ ಆಗಿಹೋದ ಮಂಜನ ಕೊಂದಾಕಿದ ಯಜ್ಮಾನ್ರ ಮೇಲೆ ಸಿಟ್ಟ್‌ಲಿ ಶಾಪಇಸಿತ್, ಕಿರ್ಚಿತ್, ನೆಲಕೈಹೊಡ್ತ್... ಯಜ್ಮಾನ್ರ ಕಣ್ಣ್ ಬಾಸೆಗೆ ಒಳ್ದ ಆಳ್‌ಗ ಸತ್ತವನ ದೂಪೆ ಮಾಡಿ, ಹುಕ್ರನ ಹೊರೆಗ್ಹಾಕಿದೊ. ಬುಡದ ಹುಕ್ರ ಪೋಲಿಸ್ ಕರ್ಕಂಡ್ ಬಾತ್. ಯಜ್ಮಾನನ ಮುಂದೆ ಹುಕ್ರನೇ ಕಳ್ಳಾಗಿ ಹೋತ್. ಊರ್‌ಬ್ಯಾಡಾಂತೇಳಿ ಊರ್‌ಬುಟ್ಟತ್. ಹೊರ್ಡ್ಕೆ ಮುಂದೆ ಮರ್ಟ್‌ಕಂಡ್ ಹೇಳ್ತ್ "ಒಂಜತ್ತೂಂಜಿ ದಿನ ಯಾನ್ ಪಿರ ಈ ಊರ್‌ಗ್ ಬರ್ಪೆ. ಈರೆನ ಎದ್‌ರ್ ಉಂತುವೆ ಉಂದು ಸತ್ಯ"ತೇಳಿ ಹೋದವ ಎತ್ತ ಹೋತೋ ಗೊತ್ಲೆ.

ಎಲ್ಲೊವೂ ಹುಕ್ರಂಗಾದ ಅನ್ಯಾಯ ನಾಳೆ ನಮ್ಮ ಬುಡಕ್ಕೂಸನ ಬಾದುತೇಳ್ವಂತದ್ ಗೊತ್ತಿದ್ದರೂನೂ ಯಾರುನೂ ಬಾಯಿ ಬುಡಿಕಿ ಹೋತ್ಲೆ. ಯಾಕೇಂತೇಳ್ರೆ ಸೇರಕ್ಕಿನೇ ಅವರ ಬೊದ್ಕು..! ನಮ್ಮ ಆಯ್ಸದ ಒಂದೊಂದು ಗಳ್ಗೆನೂ ಸನ ಯಜ್ಮಾನನ ಮನೆ ಬೆಳ್ಸಿ ಒಳ್ಸಿಕಾಗಿನೇ ಗೆಯತಾಒಳೊಂತೇಳ್ವ ಸಣ್ಣ ಸಂಗತಿನೂ ಕೂಡಾ ಅವರ ಮನ್ಸ್‌ಗೆ ಬಾತಿತ್ಲೆ. ಇನ್ನ್ ಕೇರಿಲಿ ಬೆಳ್ದ್‌ನಿತ್ತ ಹೆಮ್ಮಕ್ಕಳ ಮೊದ್ವೆಗೇಂತೇಳಿ ಏನಾರ್ ಹನೀಸ್ ಸಾಯ ಮಾಡೊಕುಂತೇಳಿಕಂಡ್ ಬೆನ್ನ್‌ಬೊಗ್ಗ್‌ಸಿಕಂಡ್ ಬಂದ ಅವ್ವಂದರೆಲ್ಲಾ ಅವ್ರ ಬ್ಯೊಗಳ್ಗೆ ಸೊತ್ತಾತಿದ್ದೊ. ಕೆಲೊವು ಸರ್ತಿ ಹೆಮ್ಮಕ್ಕ ನನ್ನ ಮನೆಗೇ ಚಾಕ್ರಿಗೆ ಬರೊಕುಂತೇಳಿ ಯಜ್ಮಾನನ ಅಪ್ಪಣೆ ಆತಿತ್. ಹೀಂಗೆ ಬಂದ ಎಟ್ಟೊ ಹೆಮ್ಮಕ್ಕ ದನಿನ ಬಾಯಿ ಸೊಗಸ್‌ಗೆ ಬೊಲಿ ಆಗಿ ಕಡೆಗೆ ಕೆರೆಲೋ, ಬಾಮಿಲೋ ಪಾಂಬುತಿದ್ದೊ. ಯಾರೂ ಬಡವ್ರ ಗೋಳ್‌ನ ಕೇಳುವಾಂಗಿಲ್ಲೆ

ಪ್ರಶ್ನೆ ಮಾಡುವಾಂಗಿಲ್ಲೆ.

ಒಂದು ಪೊರ್ಲುನ ಹಿಂಬೊತ್ತ್ ನಂಬಿದವ್ಕೆ ಇಂಬು ಕೊಡ್ವ ಪಾಷಾಣ ಮೂರ್ತಿಗೆ ಕೋಲ ಕೊಡುವ ಸಮಯಲಿ ದೆವ್ವ ಕೈಲಿ ಸೂಟೆ ಹಿಡ್ಕಂಡ್ ಆರ್ಭಟೆ ಕೊಟ್ಕಂಡ್ ಕಟ್ಟ್ ಮಾಡ್ತ್... " ಊರ್ನ ರಾಜಕೀಯ, ದುಡ್ಡುನ ಮದ, ಹಾಂಕಾರ ಎಲ್ಲ ಮುತ್ತಿ ಅಡ್ಡ್ ಅಕೇರಿ ಆದೆ. ದುಷ್ಟಶಿಕ್ಷಣೆ-ಶಿಷ್ಟ ರಕ್ಷಣೆ ಮಾಡ್ವ ದೆವ್ವನಾ... ಬಡವನ ಕಣ್ಣೀರ್ಗೆ ಬೊಳ್ಪು ಸಿಕ್ಕುವ ಕಾಲ ಬಂದದೆ"ತೇಳಿ ಕಟ್ಟ್‌ಮಾಡಿತ್ತ್.

ಇದಾಗಿ ಎರ್ಡ್ಮೂರು ವರ್ಸಕ್ಕೆ ಯಾದೋ ಒಂದ್ ಸರ್ಕಾರ "ಉಳುವವನೇ ಹೊಲದೊಡೆಯ" ತೇಳ್ವ ಕಾನೂನ್ ಜಾರಿ ಮಾಡ್ತ್. ಯಾರ ಭೂಮಿಲಿ, ಯಾರ್ ಒಕ್ಕುಲಿರ್ಲಿ, ಯಾರ್ ಗದ್ದೆಗಳ್ಲಿ ಗೇಣಿ ಮಾಡಲಿ, ಕುಮೇರಿ ಬಿತ್ತಲಿ ಅವವೇ ಆ ಆಸ್ತಿನ ಹಕ್ಕ್‌ದಾರಂಗ...! ತೇಳಿ ನೀತಿನೇಮನ ತಂದಿತ್ತ್. ಯಜ್ಮಾನನ ಸುಮಾರೆಕ್ರೆ ಭೂಮಿ ಎಟ್ಟೊ ಬತ್ತದ ಗದ್ದೆಗ ಜೀತದವರ ಪಾಲಾತ್. ಯಜ್ಮಾನನ ಸಾಮಾನ್ಗೆ ಬಿದ್ದ್ ಸುರೂನ ಪೆಟ್ಟ್...! ಕೆಲೊವರ್ನಂತೂ ಹುಟ್ಟಿಂದ ದನಗಳ ಹೊಡ್ದ್ ಕೂಪುಗೆ ಬುಟ್ಟಾಂಗೆ ಯಜ್ಮಾನ್ರ್ ಹೊಡ್ದ್ ಬೆರ್ಸಿದೊ. ಇದಾಗಿ ಹನೀಸ್ ಕಾಲಕಳೆಕನ ಯಾರೋ ಇನ್ನೊಂದು ಸುದ್ದಿನ ತಂದ್ ಹೇಳ್ದೊ. "ಪ್ಯಾಟೆಗೆ ಹೋದ ಯಜ್ಮಾನನ ಕುಲಪುತ್ರ ಯಾದನೋ್ರ್ ಕಟ್ಟಿಕಂಡ್ ಹೋತ್ಗಡ...!" ಅವನ ಪತೆ ಮಾಡಿಕೆ ಎಟ್ಟೆಟ್ಟೊ ಕರ್ಚಿ ಮಾಡಿ ಹುಡ್ಕಿಸಿರೂ ಫಲ ಸಿಕ್ಕದಾಕನ ಯಜ್ಮಾನ ಮತ್ತೆ ಪಾತಾಳಕ್ಕಿಳ್ದೊದೊ.

ತನ್ನ ಒಂದೊಂದ್ ಸೋಲುನೂ ನನ್ನ ಕೆಲ್ಸಗಾರ್ರ ಕಣ್ಣೀರ್ನ ಫಲಾಂತ ತಿಳ್ಕಣದೆ, ಬುದ್ದಿಕಲ್ಯದೆ ತಲೆಬಿಸಿಲೇ ಮುಳ್‌ಂಗಿ ಹೋತ್ ಯಜ್ಮಾನ. ಇತ್ತನಮಡೆ ಯಜ್ಮಾಂತಿ ಪರಿಸ್ಥಿತಿ ಹದಮೀರಿ ಹೋದರ ಕಂಡ್ ಬಾಕಿ ಒಳ್ಕಂಡ ಭೂಮಿನನೂ... ಒಳ್ದ ಜೀತದವರ್ನೂ ತನ್ನ ಪುಂಡ್ಯೊಳೆಗೆ ತಕಂಡತ್.

ಒಂದ್ಕಡೆ ಕೆಲ್ಸದವರ ಬರ, ಯಜ್ಮಾನಂಗೆ ಹಿಡ್ಕಂಡ ತಲೆಚೂಡ್ ಕಾಯ್ಲೆ. ಒಮ್ಮೆಗೆ ತಿರ್ಗಿಹೋದ ಕಾಲದ ಮುಳ್ಳುನೂ, ಕೆಲ್ಸದೊವೂ.... ಯಾಕೋ ಉಪ್ಪರ್ಕೆ ಮನೆಲಿ ದೀಪದ ಬೊಳ್ಪು ಕೆಟ್ಟೋಗಿ ಅಮಾಸೆನ ಕತ್ತಲೆ ತುಂಬಿಕಂಡತ್. ತೋಟಲಿ ಕೆಲ್ಸದೊವಿಲ್ಲದೆ ಆಳೆತ್ತರದ ಕಮ್ಮಿನ್ಸ್ ಬಲ್ಲೆಗಳ ನೊಡೂಲಿ ಕಮ್ಮುಗಳ ಕುಬೆಗ ಚುಂರ್ಗಿ ಹೋದೊ. ಗದ್ದೆಗ ಹಡ್ಲ್ ಬೀಳಿಕೆ ಸುರಾತ್. ಆದನೂ್ರ್ ಗೆತಿಲ್ಲದೆ ಚಾಕ್ರಿ ಮಾಡ್ತಿದ್ದ ಕೆಲೊವರ ಬೆಗ್ರ್‌ಗೆ ಕೊಡ್ತಿದ್ದ ಒಂದು ಕಾಯಿ, ಒಂದ್ಸೇರಕ್ಕಿಲಿ ಗೆಯ್ಮೆವ್ಕೆ ಗೊತ್ತಾಗದಾಂಗೆ ಮೆಲ್ಲಾಂಗೆ ಒಂದ್ ಪುಂಡಿ ಅಕ್ಕಿ ಅಕೇರಿ ಕಾಲಕ್ಕೆ ಇರ್ಲಿಂತ ಒಂದ್ ದೊಡ್ಡ ಮೊಣ್ಣ್‌ನ ಮಡ್ಕೆಗೆ ಹಾಕಿಸಿಕೆ ಸುರುಮಾಡ್ತ್ ಯಜ್ಮಾಂತಿ...!

ಒಂದಿನ ಬೊಳ್ಪುಬೊಳ್ಪಾಕನ ಯಜ್ಮಾನನ ಜಾಗೆಗೆ ಹಾಕಿದ ಬೇಲಿನ ಉದ್ಗಿಲ್ ತೆಗ್ದ್ ಯಾರೋ ಒಳಗೆ ಹುಕ್ಕೊ. ಅವನಿಂದೆ ಹತ್ನೂರ್ರ‍್ಜನಗಳ ಹಿಂಡ್. ಬಂದವ.... ಸೀದಾ ಯಜ್ಮಾನಂಗೂ.... ಯಜ್ಮಾಂತಿಗೊಂದ್ ನಮ್ಸ್ಕಾರ ಮಾಡಿ "ಸುಮಾರ್ತಲೆಮಾರ್ಗೆ.. ಗಂಜ್ನೀರ್ ಕೊಟ್ಟೋ ಕೊಡದನೋ.... ನಮ್ಮಂಥ ಬಡವ್ರ ಬಿಟ್ಟಿ ಚಾಕ್ರಿನ ಅನ್ನವಿಸ್ಯಳರಿ. ಇನ್ನ್ ಹಾಂಗಾಲ್ಲೆ. ನಾ ಯಾಗೊಳೋ ನಿಮ್ಮ ಮನೆಲಿ ಸತ್ತೊಳೆ. ನಂಗುಟ್ಟಿದ ಕೂಸ್ನನೂ ನೀವ್ ಕೊಂದಳರಿ. ಆಗ ಕತ್ತಿಮೊಡ್ಪಳೆ ಹೆರ್ಕಿಟ್ಟೋದ ನಿಮ್ಮ ಮನೆಲಿ ಗೇಯಕ್ಕಿದ್ದ ನಾಯಿ ಹುಕ್ರ ನಾನೇ..! ಅಂದ್ ಇಲ್ಲಿ ಚಾಕ್ರಿ ಮಾಡ್ತಿದ್ದೆ. ಇಂದ್ ಸರ್ಕಾರಲಿ ಚಾಕ್ರಿಗೊಳೆ. ಸಾಮೀೋ... ನನ್ನ ಎಲ್ಲ ಜನಂಗಳಿಗೆ ನಿಮ್ಮ ಜಾಗೆ ಹರ್ದ್‌ಕೀಂತಾಗಿ ಪಾಲಾಗುಟ್ಟು. ಈಗ ನಾ ನನ್ನ ಪಾಲ್ತಕಂಡೋಕೆ ಬಂದಳೆ" ತೇಳ್ಕನ ಸಂಗತಿ ಊರ್ತುಂಬಾ ಮುಟ್ಟಿತ್ತ್.

ವಿಧಿಲ್ಲದೆ ತೋಟಲಿ ಬೆನ್ನ್‌ಗಂಟಿಕಂಡ ಹೊಟ್ಟೆಲಿ ಸೀರ್ತುಂಡ್ ಬಿಗ್ದ್ ಕಟ್ಟಿ ಕೆಲ್ಸ ಮಾಡಿಕಂಡಿದ್ದ ಜೀತದೊವು ಕೊಟ್ಟ್ ಪಿಕ್ಕಾಸ್, ಕತ್ತಿ ಮೊಡ್ಪಳೆ ಎಲ್ಲ ಅಲ್ಲಲ್ಲಿನೇ ಹಾಕಿ ಓಡಿಕಂಡ್ ಬಂದೊ. ಹುಕ್ರ ದಿಡೀರ್ ಒಳ್ಳತಾದರ ಕಂಡ್ ಮೂಕ್‌ಕೊಡಿಲಿ ಬೆರ್ಲ್‌ಸಿಕಂಡೊ. ಹುಕ್ರ ಎಲ್ಲನ್ನೂ ಅಡಿಂದ ಮೇಲೆ ಮುಟ್ಟ ನೋಡ್ತ್. ಸತ್ಯ ಸಂಗತಿನ ಹೇಳ್ತ್. "ನೋಡಿ ನಿಮ್ಮ ನಿಮ್ಮ ಬೊದ್ಕು ನಿಮ್ಮ ಕೈಲಿ ಉಟ್ಟು. ಈಗ ನಿಮ್ಮ ಹಕ್ಕ್ ಕೂಡಾ ನಿಮ್ಮಕ್ಕಲೆ ಉಟ್ಟು. ಮೊನ್ಷತ್ವ ಇಲ್ಲದವ್ರಕ್ಕಲೆ, ಗೆಯ್ಕಂಡಿದ್ದರೆ ನೀವು ಗೇಯತಾ ಇದ್ದರೆ; ಅವು ಬೆಳ್ಕಂಡೇ ಇದ್ದವೆ. ನೋಡಿ ಈಗಾರ್ ನಾವೆಲ್ಲೊವು ಒಳ್ಳದಾವ ಕಾಲ ಬಂದುಟ್ಟು. ಇಂಥ ಸಾವ್ಕಾರ್ರಿಗೆ, ಅಧಿಕಾರ ಮದದವ್ಕೆ, ಜಮೀನ್ದಾರರ್ಗೆ, ಮೊನ್ಷತ್ವ ಇಲ್ಲದ ಮುರ್ಗಗಳಿಗೆ ಬುದ್ದಿ ಕಲ್ಸಿಕೆ ನನ್ನೊಟ್ಟಿಗೆ ಬನ್ನಿ"ತೇಳ್ಕನ ಎಲ್ಲೊವೂ ಹೋ...ತೇಳಿ ಕೊರ್ಚಿಕಂಡ್ ಹುಕ್ರನ ಬೆನ್ನಿಂದ್ಹೆಕಂಡ್ ಹೊರ್ಟ್ರೊ..!

ನನ್ನ ಮನೆಲೇ ಚಾಕ್ರಿಗಿದ್ದ್ ನನ್ನ ಗಂಜಿನೀರ್ ಕುಡ್ದ್ ಬೆಳ್ದ ಕೇರಿನ ಜನಂಗ ಹುಕ್ರನ ಹಿಂದೆಕಂಡ್ ಹೊಗ್ಗ್‌ಲಿ ನಾಯಿಗಳಾಂಗೆ ಹೊರ್ಟ್‌ಹೋದರ ನೋಡ್ದ ಯಜ್ಮಾನಂಗೆ ಸೈಸಿಕಣಿಕಾಗದ ನಾಚಿಕೆ, ಮೊರ್ಯಾದಿ ಪ್ರಶ್ನೆ ಅದಾಗಿತ್ತ್. ಹುಕ್ರನ ಎದೆ ಮೆಟ್ಟಿ ತಿರ್ಗಿ ಬೀಳ್ವ ಕಾಲ ಕಳ್ದ್‌ಹೋಗ್ಟುಂತನ್ಸಿ ಏನೋ ಹೇಳಿಕೆ ಬಾಯಿ ಬುಟ್ಟವು ಅಲ್ಲೇ ಮುಂಗರ್ಸಿ ಮೊತಿ ತೊಪ್ಪಿ ಬಿದ್ದೊ. ಕಾಲನ ಮುಳ್ಳ್ ತಿರ್ಗಂಡೇ ಇತ್ತ್. ಯಜ್ಮಾನನ ಅರ್ಭಟೆನ ಬಣ್ಣದ ಯಾಸದ ಒಂದೊಂದೇ ಬಣ್ಣ ಮಳ್ಕೊಲ್ ಮಾಯಣ ಏಲ್ದಾಂಗೆ ಏಲಿಕಂಡ್ ನೆಲಕ್ಕೆ ಬೀಳಿಕೆ ಸುರಾತ್. ಯಜ್ಮಾನ-ಯಜ್ಮಾಂತಿನ ಬುಟ್ರೆ ಉಪ್ಪರ್ಕೆ ಮನೆ ಎಲ್ಲವ್ರ ಕಳ್ಕಂಡ್ ತಬ್ಬುರಿಕೂಸ್ನಾಂಗಾಗಿತ್ತ್. ನಂಬಿದ ದೆವ್ವ ಕೈ ಕೊಟ್ಟುಟ್ಟು. ಜನಂಗ ತಿರ್ಗಿ ಎದೆ ಒಡ್ಡ್‌ಸಿ ನಿತ್ತಳೊ. ಕೈಲಿದ್ದ ಕಾಸ್, ಅಡ್ಕೆ, ಕಾಯಿ, ಬತ್ತದ ರಾಶಿ ನಿದಾನಲಿ ಖಾಲಿ ಆಕಂಡ್ ಬಾತ್. ಯಾಕೋ ಏನೋ ಯಜ್ಮಾನಂಗೆ ಮೊದ್ದಿಲ್ಲದ ಕಾಯ್ಲೆನೊಟ್ಟಿಗೆ, ಮನೆತುಂಬಾ ಎಲಿ

ಹೆಗ್ಗಣಂಗ ಸೇರಿ ಸುತ್ತೊಳು ಮೊಟೆ ತೆಗೆಕೆ ಸುರುಮಾಡಿದ್ದೊ. ಮನೆಸುತ್ತ್ ಕಾಡ್ ಬಲ್ಲೆ ಹಳ್ಳು ಬೆಳ್ದ್ ಕತ್ತಲೆ ಕೂಡಿಟ್ಟು. ಕಡೆಗೊಂದಿನ ಯಜ್ಮಾಂತಿ ಕರ್ದ್ ಹೇಳ್ತ್, "ಓಯ್ ಎಲ್ಲ ಮುಗ್ತ್.... ಮಾಡಿಸಿದ ಅಕ್ಕಿ ಬತ್ತ ಎಲ್ಲ ತೀರ್ತ್. ನಾವು ಉಪಾಸ ಬಿದ್ದ್ ಬಾಯ್ಗೆ ನೀರಿಲ್ಲದೆ ಸಾಯ್ದು ಖಂಡಿತಾ ಎಂತರ ಮಾಡ್ದು ಹೀಂಗಾದರೆ ಹೇಳಿ" ಹೆಣ್ಣ್‌ನ ಮಾತ್ಕೇಳ್ದ ಯಜ್ಮಾನ ಹೇಳ್ತ್... "ನೋಡು ಅಂದ್ ಜೀತದವ್ಕೆ ಕೊಡ್ತಿದ್ದ ಸೇರಕ್ಕಿಲಿ ಅವ್ಕೆ ಗೊತ್ತಾಗದಾಂಗೆ ಒಂದೊಂದು ಮುಂಡಿ ತೆಗ್ದಿಸ್ತಿದ್ದ ಆ ಕೊಮ್ಮೆಲಿದ್ದ ಅಕ್ಕಿನ ಉಪಯೋಗ ಮಾಡಿಕೆ ಈಗ ಕಾಲ ಬಂದುಟ್ಟು" ಯಜ್ಮಾಂತಿ ಸೀದಾ ಹೋಗಿ ಉಪ್ಪುರ್ಕೆ ಮಾಡಿನ ಅಟ್ಟಕತ್ತಿ ಅಕ್ಕಿ ಕೊಮ್ಮೆಗೆ ಕೈಯಾಕ್ಕಿದ್ದೇ ತಡ... ಒಮ್ಮೆಗೆ ಜೋರ್ಲಿ ಕಿರ್ಚಿ ಹೊಣ್ಕೆ ಬೀತ್. ಏನಾತ್ ನೋಡನೋಂತ ಯಜ್ಮಾನ ಮಡ್ಕೆಗೆ ಕೈ ಹಾಕಿರೆ...!! ಕೈ ತುಂಬ ಅಂಟಿ ಹಿಡ್ದ ರಕ್ತದ ಗಟ್ಟಿಗ....!!!.

***

# ಶೇಕಲಪ್ಪ...

ಯಾಕೋ ಒಂದ್ವಾರಂದೀಚೆಗೆ ದಿನೋಳು ಬೊಳ್ಪಿಗೆ, ಹಿಂಬೊತ್ತ್ ಎರ್ಡೊತ್ತ್ ಮನೆಗೆ ಬಂದ್; ನೀರೋ, ಗಂಜಿನೋ ಕೊಟ್ಟದರ ತಿಂದ್ ಕುಡ್ದ್, ಚಾಳೆ ಕುಬೆ ಮೊಗ್ದ್ ಕುರ್ವಾಯಿಗೆ ಜೆಪ್ಪಿ ಉಪ್ಪಾಕಿ ಆರ‍್ಯಕೆ ಮಾಡ್ದೋ...; ಕೀಲೆ ಕಟ್ಟುದಾ..; ಬಸಲೆ ಬೊಳ್ಳಿಗೆ ಚಪ್ಪರ ಹಾಕುದಾ..; ಕಾಡ್‌ಮ್ಯಾನ ಮರದ ಕೊಡಿಗೆ ಹತ್ತಿ ಮಿಡಿ ಕೊಯ್ದ್ ಕೊಡ್ದಾ...; ಏನಾರ್ ಕೈಲಾದ ಚಿಲ್ಲರೆ ಕೆಲ್ಸ ಮಾಡಿ ಕೊಡ್ತಿದ್ದ ಶೇಕಲಪ್ಪ ಯಾಕೋ ಕಣ್ಣ್‌ಗೆ ಕಾಂಬಕೆನೇ... ಸಿಗ್ತಾ ಇಲ್ಲೆ. ಅವನ ಸಾಯ ನಂಗೀಗ ಬಾರೀ ಅರ್ಜೆಂಟ್ ಆಕು. ಕಾರಣ ನಮ್ಮ ಮತ್ತೆ ಕೋಣಗದ್ದೆವ್ರ ಅದ್ರ್ ಒತ್ತಿಗಿದ್ದ ಹುತ್ತಲಿ ಒಂದ್ ತೊಡ್ಡೆ ಜೇನ್ ಒಕ್ಲು ಕುದ್ದಿತ್. ಈ ಸಂಗತಿ ಸೌದೆ ಚೆಂಬ್ರ್ಜು ತಾಕೆ ಹೋದ ನನ್ನ ಹೆಂಗ್‌ಸ್‌ನ ಕಣ್ಣ್‌ಗೆ ಬೀಳಲಿ...; ಮನೆ ಮೆಟ್ಟ್ ಹತ್ತಿಕೆ ಮುಂದೆನೇ ಒಂದೇ ಉಸ್ರುಗೆ "ಸಂಗತಿ ಹೀಂಗೀಂಗೆ, ಅಲ್ಲಿ ಸರ‍್ಯಾದ ಒಂದ್ ಜೇನ್ ವೊಕ್ಕುಲು ಉಟ್ಟು. ಜೇನ್ನೆಳಂಗ ದೇವ್ರಿಗೆ ಕೈ ಮುಗೆಕೆ ಎದ್ರ್‌ಕನ ಹಾರ‍್ದು ಕಂಡತ್. ಹಕ್ಕಲೆ ಹೋದರೆ ಹುತ್ತ ಬುಡಲಿ ಬೆಳ್ಳಂಗೆ ಕಂಡದೆ. ಅದ್ ದಾರಿ ಕರೆಲಿ ಒಳದ್ ಬೇರೆ...! ಇಂದ್ ನಾಳೆ ಆಗಿ ಅದರ ತೆಗೆದಿದ್ದರೆ; ಬೇರೆ ಯಾರಾರ ಕಣ್ಣ್‌ಗೆ ಮಿನಿ ಆಂಜಿರೆ ಮತ್ತೆ ಅದರ ಆಸೆ ಬುಡೊಕು. ಮನೆಲಿ ಮೊದ್ದ್‌ಗೆ ಸಮೇತ ಜೇನಿಲ್ಲೆ. ಹೇಂಗಾರ್ ಮಾಡಿ ಅದರ ತೆಗಿಯೊಕು"ತೇಳಿ ಹೆಣ್ಣ್ ಹೇಳ್ಕನ ನಂಗೆ ಟಮ್ಮ... ನೆಂಪಾದ್ ನಮ್ಮ ಶೇಕಲಪ್ಪ...!!

ಶೇಕಲಪ್ಪನ ಜಾತಿ, ಅಂವ ಹುಟ್ಟಿದ ಬಗೆ ಜನಂಗ ಸಾವರ ಕತೆ ಹೇಳ್ವೆ. ಆದರೆ ಅಂವ ಜನಂಗಳ ಹಾಕ್ಮಲೆ ಹೊಯ್ಮಲೆಗಳಿಗೆ ತಲೆ ಹಾಳ್ ಮಾಡಿಕಣದೆ ಅಂವ ಆತ್ ಅವನ ಕೆಲ್ಸಾತ್ ಮಾಡಿಕಂಡ್; ಇದ್ದ ಒಂದಕ್ಕನ ಮೊದ್ಯೆ ಮಾಡಿಕೊಟ್ಟ್ ಅಯ್ಯೆನೊಟ್ಟಿಗೆ ತಾನೂ ಬೊಟ್ಟಲಿ ಒಂದ್ ಬಿಡಾರ ಮಾಡಿಕಂಡ್ ಇತ್ತ್. ಅವಂಗೆ ಯಾವ ಕೆಲ್ಸ ಗೊತ್ತುಟೂಂತ ಕೇಳ್ದರ ಬದಲ್ ಯಾದ್ ಗೊತ್ತೆಲ್ಲೇಂತ ಕೇಳ್ದು ಉತ್ತಮ. ಎಂಥ ರಣ ಬೆದ್ರ್‌ಹಿಂಡ್‌ನಾದರೂ... ಕಡ್ದ್ ಮುಳ್ಳು ಹೆರ‍್ದ್; ಬೇಲಿ ಕಟ್ಟಿದೆ. ಗಳೆ ಕಡ್ದ್ ಕೊಟ್ಟಾನ್ ಕೊಡಿ ಕೊಮ್ಮುಗೆ ಹತ್ತಿ ಅಡ್ಕೆ ತೆಗ್ದದೆ. ಬೆದ್ರ್ ಬಾಸ್‌ಮಾಡಿ ಕೂಳಿ, ಯಾಪೆ, ಕೂಂಜೋಳ್, ಕುಕ್ಕೆ, ಕುಡ್ಪು, ಬೆಂಡ್‌ಕುಕ್ಕೆ, ಕೊಮ್ಮೆ, ಕಡ್ಕೆ ಮಾಡ್ದೆ; ಜೋಡಿಕರೆಲಿ ಬೆಳ್ದ್‌ನಿತ್ತ ಮುಳ್ಳು ಮುಡೆಂಜನ ಕಡ್ದ್ ಮೊಲ್ಗಿಕೆ ಮೊಂದ್ರಿ; ಮಕ್ಕಳ ಮೊಲ್ಗ್‌ಸಿಕೆ ಚಕ್ಕಳ ಮಾಡಿಕೊಟ್ಟದೆ. ಮನೆಗೆ ಮುಳಿಹುಲ್ಲು ಹೋಸಿದೆ. ಕೊಟೆಗೆಗೆ ಹಟ್ಟಿಗೆ ಸೋಗೆ ಹಾಕಿದೆ. ಹತ್ತಿಕಾಗದ ಮರಗಳಿಗೆ ಕತ್ತಿ ಕೊಡ್ಪಿ ಪುರು-ಪುರು ಕುರೆ ಹತ್ತಿದಾಂಗೆ ಹತ್ತಿ ನೇಲಿ ಸೊಪ್ಪು ಕೊಚ್ಚಿ ಮರ ಕಪಾತ್ ಮಾಡ್ದೆ. ಗದ್ದೆಲಿ ಹೂಟೆಗಿಲ್ಲದ್ರೆ

ಹುಲಿ ಇಂವ..! ಎಂಥ ಹೂಡಿಕೆ ಬರದ ಎತ್ತ್‌ಗಳ್ನೂ ಪಳ್‌ಂಗ್‌ಸಿ ಹೂಟೆ ಮಾಡಿ ಹಲೆಗೆ ಹೊಡ್ದ್, ಪುಣಿಕಡ್ದ್ ನೇಜಿ, ನಾಟಿ, ಕಡೆಗೆ ಬತ್ತ ಹೊಡ್ದ್ ಕೊಟ್ಟ್ ಅಟ್ಟಕ್ಕೂ ಹಾಕಿ ಕೊಟ್ಟದೆ. ದೀಪಾವಳಿಗೆ ಮರ ಹಾಕಿಕೆ, ಗದ್ದೆಗೋರಿಗೆ, ಹಾಡ್ತನ ಹೇಳಿಕಂಡ್ ತೆಂಬರೆ ಬೊಡ್ಕಂಡ್ ಪುಣಿಸುತ್ತ ಬಂದ್ ಮೂರ್ತ ಮಾಡ್ದೆ. ಹೊಡಿದೆವ್ವಗಳ ಕೋಲಕಟ್ಟೆ ಕಿ...ಹೋ...ಕುರ್ರೋ...ಹೋ ಅಂತ ಆರ್ಬಾಯಿನೂ ಕೊಟ್ಟದೆ. ಪೊಡಿ ಮಕ್ಕ ಇಂವನ ಕಂಡರೆ ಸಾಕ್ 'ಕಿಂದರಿ ಜೋಗಿನ' ಮುತ್ತಿಕಂಡಾಂಗೆ ಹಿಂಡ್ ಕಟ್ಟಿ ಅವನ ಸುತ್ತ ಮುತ್ತಿಕಂಡ್.... ಚಾಳೆ ಒಲಿಲಿ ಪೇಪೆ, ಗಿರ್‌ಗಿಟ್ಟ್, ರಬ್ಬರ್ ಹಾಲುಂಡೆನ ಚೆಂಡ್, ಕ್ಯಾಟ್ರ್‌ಬಿಲ್ಲ್, ರಬ್ಬರ್ ಕಾಯೆಲಿ ಗಾಡಿಗ, ದನಗಳ ಗಂಟ್ಲ್‌ಗೆ ಕಟ್ಟುವ ಮೆಂಟೆಗ ಹೀಂಗೇ... ತರಾವರಿ ಕೊಂತಣಗಳ ಮಕ್ಕಳಿಗೆ ಮಾಡಿಕೊಟ್ಟ್ ಅವರ ಕುಸಿ ಮಾಡಿ ಹೆಡ್ಡ್ ಮಾಡ್ದೆ.!

ಆದರೆ ಇದರೆಲ್ಲದಂರ್ದ ಹೆಚ್ಚಿನ ಸುಖದ ಕೆಲ್ಸ ಅವಂಗೆ ಜೇನ್ತೆಗಿದು, ಮೀನಿಡಿದು, ಕಾಡಿಗೆ ಹೋದು.... ಇಟ್ಟ್ ಕೆಲ್ಸಲಿ ನೀವು ಒಂದನಾಕ್ಕರ್ ನಡಿರ್‌ಲಿ ಬೇಕರೆ ಅವಂಗೆ ಕರ್ದ್ ಎದ್ದ್‌ರ್ಸಿ ಹೇಳಿ ಕಣ್ಣ್ ಚಿಂಬ್ರಿಕಂಡ್ ಎದ್ದ್, ಎಲಾಡ್ಕೆನ ಬಾಯಿಮುಚ್ಚ ತುಂಬುಸಿಕಂಡ್ ಕುರೆನಾಂಗೆ ಕೊಣ್ಕಂಡ್ ಒಟ್ಟಿಗೆ ಬಂದದೆ.!

ಮೇಲೆ ಮಾಪುಳ್ಳಿ ಹೊಂಡಂದ ಹಿಡ್ದ್ ಅಡಿಮ್ಮೆ ಕಾಡ್ಪಂಜದ ಪಟ್ಟೆಂಜಿ ಬೊಬ್ರು ಗುಂಡಿಗೆ ಮುಟ್ಟ... ಪಯಸ್ವಿನಿ ಹರ್ಕಂಡ್ ಹೋದಾಂಗೆ ಹೋದರೆ ಅವನ ಹಜ ಗುರ್ತ ಕಾಂಬಕೆ ಸಿಕ್ಕುದು..! ಬಂಡೀ ಮಳ, ಹಣಿನ್ಪಾರೆ, ದನಂಬಳಗುಂಡಿ, ಕುದ್ರೆಹೊಂಡ, ಬೊಳ್ಳಿಗುಂಡಿ, ಪಂಚಮ್ಮಿಪಾರೆ, ಕೂರ್ಲ್‌ಹೊಂಡ, ತಿರ್ಗಣೆ ಗುಂಡಿ ಹೀಂಗೆ ಪಯಸ್ವಿನಿ ಹಳ್ಳದ ಗರ್ಬೊಲಿ ಯಾವ್ಯಾವ ಹೊಂಡ ಗುಂಡಿಗ ಒಳೊ.... ಆ ಗುಂಡಿಗಲ್ಲಿ ಯಾವ್ಯಾವ ನೊಮೂನೆಗಳ ಮೀನ್ನೊಳೋ ಮತ್ತೆ ಅದರ ಹೇಂಗೆ ಹಿಡೆಕುತೇಳ್ವ ಎಲ್ಲಾ ಸಂಗತಿನೊಟ್ಟಿಗೆ ಒಂದೊಂದ್ ಹೊಂಡಗಳ ಬಗ್ಗೆನೂ... ಬಗೆ ಬಗೆ ಕಥೆಗಳ ರಸSSSಲಿ ಹೇಳ್ದುಕೂಡಾ ಗೊತ್ತುಟ್ಟು ಅವಂಗೆ..!

ಹೀಂಗೆ ಅಂವ ಹೇಳ್ದ ಕಥೆಲಿ....; ಊರ್ನವರ ಹೆದರ್ಸಿ ಹನೀಸ್ ಸಮಯ ಹಳ್ಳದ ಉಳಿಯದ ದಾರಿಲಿ ಯಾರೂ ನಡೆದಾಂಗೆ ಮಾಡ್ದ ಅವನ ಕಥೆನ ನಾನೂ ಅವನ ಬಾಯೆಂದಳೇ ಕೇಳಿದ್ದೆ. ಒಂದ್ ಹಿಂಬೊತ್ತಿಂಬೊತ್ತಾಕನ ಅವನೂ... ಅವನ ಗಾಳನೂ ಎರ್ಡೂ ಹಳ್ಳದ ಕರೆಲಿ ಕುದ್ದ್‌ಕಂಡ್ ಇರ್ಕನ ಒಂದೇ ಸರ್ತಿಗೆ ಅದುವರೆಗೂ ಭೂಮಿ ಮೇಲೆ ನೋಡದ ಅತ್ತ.. ಮುರ್ಗನೂ... ಅಲ್ಲದ, ಇತ್ತ ಮೊಯಿಂಸನೂ ಅಲ್ಲದ ಒಂದ್ ಜೀವಾದಿ ಪಾರೆಕಲ್ಲ್ ಮೇಲೆ ಕುದ್ದ್‌ಕಂಡ್, ತಲೆ ಹರ್‌ಂಡಿಕಂಡ್ ಕುದ್ದಿತ್ ಗಡ. ಇಂವ ಅದರ್ನೇ ನೋಡ್ತ್‌ಗಡ. ಆ ಜೀವಾದಿ ಒಮ್ಮೆಕಲೆ ನೀರ್ಗೆ ಮುಳ್‌ಂಕ್ ಹಾಕಿ ಎದ್ರ್‌ಕನ ಎರ್ಡ್

ಕೈಲೂ ಎರ್ಡ್ ದೊಡ್ಡಾ... ಮೀನ್‌ಗಳ ಹಿಡ್ಕಂಡ್ ಬಂದ್ ಪಟಕ್ಕಂತ ಪಾರೆಕಲ್ಲ್‌ಗೆ ಹೊಡ್ತ್‌ಗಡ... ಹಾಂಗೇ ಚಪ್ಪಿಕಂಡ್ ಪಚಪಚಾಂತ ಅದರ ಎರ್ಡೂ ಕೈಲೂ ತಿಂಬಕೆ ಸುರ್‌ಮಾಡ್ದಾಂಗೆ... ಇಂವ ಕುದ್ದ ಜಾಗೆಲಿ.... ಮೇಲೆಂದ ಒಂದ್ ಒಣ್‌ಂಗಿದ ಮರದ ಕುದೆ ಬುಡ್ಕಂತ ಬೀತ್‌ಗಡ.... ಆ ಸದ್ದ್‌ನ ಕೇಳಿ ತಿರ್‍ಗಿ ನೋಡ್ದ ಆ ಜೀವಾದಿನ ಕಣ್ಣ್‌ಗೆ ಇಂವ ಕಂಡಾಂಗೇ... ಅದ್ ಅದರ ಕೋರೆ ಹಲ್ಲ್‌ನನೂ... ನಾಲಿಕೆನೂ... ಹೊರೆಗೆ ಹಾಕಿ ಸುಂಯ್ಕ ನೀರ್‍ಗೆ ಹಾರಿ ಇವರ ಕಾಲ್‌ಬುಡಲಿ ಬಂದ್ ಎದ್ದತ್‌ಗಡ.! ಇಂವ ಒಂದೇ ಕೊದೆಗೆ ಹದ್ಕಿ ಬಿದ್ದ್ ಆರ್ಬಾಯಿ ಕೊಟ್ಟ್ ಬಡ್ಜೀ.... ಓಡ್ದಂವ ಮತ್ತೆ ಮೂರ್‍ದಿನ ಎದ್ದತ್ಲೆಗಡ.! ಈ ಕಥೆ ಊರ್‍ಗೆ ಪೂರಾ ತುಂಬಿ ಜನಂಗಳ ಎಡೆಲಿ ಅದ್ ತರಾವೊರಿ ರೂಪಲಿ ಬಾಯೆಂದ ಬಾಯ್ಗೆ, ಕೆಬಿಂದ ಕೆಬಿಗೆ ದಾಟಿ ಹನೀಸ್ ಸಮಯ ಆ ದಾರಿಲಿ ಜನಂಗ ಬುಡಿ; ದನಂಗ ಕೂಡಾ ದಾಟ್‌ತಿತ್ಲೆ!

ಇದಾಗಿ ಹದ್ನೈದ್ ದಿನ ಕಳ್ದೀರ್‍ದು ಕತ್ತಲೆ ಕತ್ತಲೆ ಆಕನ ಸೇಕಲಪ್ಪ ಭಾರೀ ಅಂಬೇರ್ಪುಲಿ ಮನೆಕ್ಕಲೆ ಬಂದ್ "ಉಳ್ಳಾಯ.... ಓ... ಉಳ್ಳಾಯ" ಅಂತ ಕರಿವ ಸೊರ ಕೇಳಿ ಓಡಿ ಬಂದೆ. ನೋಡ್ರೆ... ಮಳ ಉದ್ದದ, ತೊಡೆತೋರದ ಎರ್ಡ್ ಮಡೆಂಜಿ ಮೀನ್‌ಗಳ ಗೋಣಿ ಒಳೆಗೆಂದ ಕೊಡ್ಕಿ ಹಾಕಿ ಸೇಕಲಪ್ಪ ನೆಗಾಡಿಕಂಡ್ ಎರ್ಡಕ್ಕಾಗಿ ಐನೂರ್ ಕೊಡಿ ತೇಳಿ ಕೈನೀಂಡಿ ಸೀರ್‍ತುಂಡ್‌ಲಿ ಗಾಳಿ ಬೀಸಿಕಂಡ್ ಕುದ್ದತ್.!

ಸಂಗತಿ ಆದ್ದ್ ಇಟ್ಟೇ... ಇಂವ ಕಳ್ಳ ಯಾಗೋಳ್ನಾಂಗೆ ಅಂದೂ ಗಾಳಕ್ಕೆ ಹೋಗುಟ್ಟು ಅಂವನ ಮಾಮೂಲ್ ಗಾಳದ ಹೊಂಡಲಿ ಅಂವ ನಾಕ್ ಮಡ್‌ಂಜಿಗಳ ನೋಡಿಟ್ಟು. ಈ ಸಂಗತಿ ಬೇರೆ ಯಾರಿಗಾರ್ ಗೊತ್ತಾದರೆ ನನ್ನ ಕೈ ತೊಪ್ಪುದು ಖಂಡಿತಾಂತೇಳಿ ಚಾತುರ್ಪ ಮಾಡಿ ಆ ವಿಚಿತ್ರ ಜೀವಾದಿನ ಸುಷ್ಣೆ ಮಾಡಿ ಜನಂಗಳ ಅತ್ತನ ಪುಡೆಗೆ ಹಜ ಊರದಾಂಗೆ ಮಾಡಿ ನಾಕ್ ಮಡ್‌ಂಜಿ ಮೀನ್ಗಳ ಹಿಡ್ದ್ ಎರ್ಡರ ಆಚೆಕರೆ ಪುರ್ಬುಗಳಿಗೆ ಕೊಟ್ಟ್... ಐನೂರರ ಎರ್ಡ್ ನೋಟ್‌ನ ಪೀಂಕ್‌ಸಿ ಒಳ್ದ ಎರ್ಡರ ತಕಂಡ್ ಬಂದ್ ಇಟ್ಟಿಮೀಸೆ ಕೊಡಿಲಿ ನೆಗಾಡಿಕಂಡ್ ಇಡೀ ಊರ್‍ನ ಹೆದರ್ಸಿ ತನ್ನ ಕೆಲ್ಸ ಮಾಡಿಕಂಡ ಅಂವ; ಅವನ ಬಗ್ಗನೇ ಪೊವ್ರ್ ಕೊಚ್ಚಿಕಂಡತ್.!

ಮೀನ್ ಹಿಡಿದರ್ಲಿ ಮಾತ್ರ ಸೇಕಲಪ್ಪನ ಮುಂದೆ ಎಂಥ ಮುಕ್ಕರೂ ತಲೆಬಬೊಗ್ಗ್‌ಸಿ ನಿಲ್ಲೊಕು. ಸಣ್ಣ ಮೆಣ್ಸ್‌ನೂ... ಬೇಪರ್‌ನನೂ ಕಡ್ದ್ ನೀರ್ ಗುಂಡಿಗಳಿಗೆ ಹಾಕುದು, ಕೆಂಗೆಟ್ಟ್‌ನೂ... ಕಾಡ್ಗರ ಕಾಯೆನನೂ ಗುದ್ದಿ ಕಟ್ಟಾಕುದು; ನೊರೊಳ್ಕಾಯೆ ಬೇಸಿ, ಬೀಜತೊಪ್ಪೆನೂ ಬೂದಿನೂ ಸೇರ್‍ಸಿ ಮಿದ್ದ್ ಕರ್‍ಡಿ ಮೀನ್‌ಗಳ ಮೋಟೆಗೆ ನೀರ್ ಹೊಡ್ದ್ ಕೈ ತೋರದ ಮೂಡ್, ಬಾಳೆಗಳ ಹೊರ್ಡ್‌ಸಿ ಹಿಡಿದು; ಅದಲ್ಲದೆ ಉಬೊರ್ ಮೀನ್‌ನ

ಸಮಯಲಿ ಯಾವ ದಿನ ಎಟ್ಟ್ ಮಳೆ ಹೊಯ್ದರೆ ಮೀನ್ ಹತ್ತಿದೇಂತ ಪಕ್ಕಾ ಅಂಞಣ ಇಸಿದಾಂಗೆ ಲೆಕ್ಕ ಹಾಕಿ ಹೇಳ್ವ ಸಾಮಾನ್. ಸುರೂನ ಎರ್ಡ್ ಮಳೆಗೆ ಕೊಡಿಕೊಡಿ ನೀರಾಕನ ಬೆರೀ... ಮುಳ್ಳ ಮೀನ್‌ಗ, ಮೂಡುಗ ಹತ್ತಿರೆ ಹನೀಸ್ ಮಳೆ ಜಾಸ್ತಿ ಆಗಿ ಭೂಮಿಗೆ ಬಿದ್ದ ನೀರ್‌ನೂ, ಒರ್ತೆ ನೀರ್‌ನೂ... ಸೇರಿ ಅದ್ ಒಂದ್ ಹದಕ್ಕೆ ಬಿಸಿ ಆದೆ... ಆ ಬೆಚ್ಚನ ಪಾರಕಾದ್‌ಕಂಡ್ ಗದ್ದೆಗಳಿಗೆ, ಉಜಿರ್‌ಕಣಿಗಳಿಗೆ, ಹುಲ್ಲು ಇರುವ ಪೊಳ್ಳಗಳಿಗೆ, ಹತ್ತಿ ಕೆತ್ತಿ ಉರ್ಚುವ ಕಲ್ಲ್‌ಮುಳ್ಳ್‌ಗಳಿಗೆ ಇಂವ ಯಾಪೆ, ಕೂಳಿ ಇಸಿ ಸೇರ್‌ಗಟ್ಲೆ ಮೀನ್ ಹಿಡ್ದ್ ಗೈಪುನೂ... ಒಳ್ದರೆ ಕಳಿತೊಡ್ಪಲಿ ಒಣ್‌ಗಿಕೂ ಹಾಕ್ತಿತ್ತ್.!

ಇಂಥ ಮೀನ್ ಬೇಟೆ ಬುಟ್ರೆ ಅವಂಗೆ ಇನ್ನೊಂದ್ ತರದ ಸುಖ ಸಿಕ್ಕುದು ಇಟ್ಟೆಂಜ ದೈ ಬುಡಲಿ ಗೂಡ್‌ಕಟ್ಟ್‌ವ ಹುಳುಗಳ ಹಿಡ್ದ್ ಅಡ್ಚಿಲ್‌ಗೆ ತಿನಸ್ ಹಾಕಿ ಸೆಗ್ಣಿಕಾರ ಹಕ್ಕಿನ ಬೀಳ್ಸುದು, ಗುಂಡಿಗದ್ದೆ ಕೈಸಾಲ್ನ ಹೆರ್ದ್ ಕೆರ್ದ ದಿನ ಗದ್ದೆ ಪುಣಿಲೇ... ನಡ್ಕಂಡ್ ಬಂದ್ ಎಸಂಡ್ ಮೊರಿಗಳ ಹಿಡೆಕೆ ಬಾವ ಗುಮ್ಮಂಗಳಿಗೆ ಸಿಡಿ ಹಾಕುದು, ಯಾಮೆಗಳ ಹಜ ಗುರ್ತಲೇ ಹೋಗಿ ಅದರ ಮೋಟೆನ ಎಳ್ಳಿ ನಾಕೈದ್ ಯಾಮೆಗಳ ಹಿಡ್ಕಂಬೊದು, ಮರ ಕೊಡಿಲಿ ಕುದ್ದ್, ಗೋಳಿ ಹಣ್ಣ್, ಅಶ್ವೊತ್ತ್ ಹಣ್ಣ್ ತಿಂಬ ಕಾಳಿಂಗ, ಹೊಟ್ಟ, ಏಳ್‌ಂಡ್ಲೆ, ಕುಳ್ಳುಮ್ಮೆಗಳಿಗೆ ಸೊಪ್ಪು-ಸೋಪ್ಪು ಹೋಗಿ ಮಳ್ಕೋಲ್ ಒಡ್ಡಿ ಹಕ್ಕಿ ಹಿಡಿದು... ರಾತ್ರೆ ಲೈಟ್‌ಗೆ ಪೋಯಿಂತ ಯಾರಾರ್ ಹೇಳ್ರೆ ಸಾಕ್ ಊರ್ಗೆ ಮುಂದೇ ಹೊರ್ಟ್‌ನಿತ್ತ್; ಗೊತ್ತೇ ಆಗದಾಂಗೆ ಹತ್ತಿಕಂಡ್ ಬಂದ್ ಕಿಂಕಿನಡಿಗೆ ಮುಟ್ಟ ಹತ್ತಿ ರಕ್ತ ಊರ್ಪುವ ಉಂಬುಳ್‌ಗಳಿಗೆ ಹೊಸೆಪುನ ಉಂಡೆಮಾಡಿ, ಕೆಣಿಮಾಡಿ ಕೊಂದ್ ಕೆಡ್ಗುಂಗುಸುದು.! ಕಾಡಂದಿ ಮೊರಿಗಾದರೆ ಹೇಂಗೆ ದಡ್ಡೆಗಾದರೆ ಹೇಂಗೆ, ಒಂಟಿಂಜಂಗಾದರೆ... ಹೇಂಗೆ ಯಾವ ಕಂಡಿಲಿ ಎಟ್ಟೆತ್ತರಲಿ ಉರ್ಳಿಸೊಕು, ಬೆಡಿಕಟ್ಟೊಕೂಂತನೂ ಗೊತ್ತುಟ್ಟು.

ಇಟ್ಟೆಲ್ಲಾ ಗೊತ್ತಿದ್ದ ಸೇಕಲಪ್ಪಂಗೆ ಜೇನ್‌ತೆಗಿದು ದೊಡ್ಡ ಇಸಯ ಅಲ್ಲ ಬುಡಿ; ನಾನೂ ಕೂಡಾ ಸುಮಾರ್ ಜನ ಜೇನ್‌ಗೆ ಕೈ ಹಾಕುದು ನೋಡ್ಯಳೆ. ಆಗೆಲ್ಲಾ ಜೇನ್ನೆಳಂಗ ಅವ್ಕೆ ಬೆರ್ಸಿ, ಬೆರ್ಸಿ ಕುಟ್ಟುದು, ಅವು ಮಾರ್ನೆ ದಿನ ಕಣ್ಣ್, ಮೋರೆ, ದುಂಡ್ ಬಾಪುಸಿಕಂಡದರ್ರೂ ನೋಡ್ಯಳೆ. ಆದರೆ ಈ ಮೊನ್ಸ ಹಾಂಗಲ್ಲ ಜೇನ್ ಕುದ್ದ ಜಾಗೆಗೆ ಹೋಗಿ ಬಾಯೆಲಿ ಚೂರ್ ಗಾಳಿ ಉರ್ಗಿದಾಂಗೆ; ಈ ಸೇಕಲಪ್ಪಂಗೂ, ಜೇನ್ನೆಳಂಗಳಿಗೂ ಯಾದೋ ಹಳೇ ಪೊಂಡ್‌ನ ಕಾಲದ ಸಂಬಂಧದಾಂಗೆ ಇಂವನ ಕೈ ಸೋಂಕಿರೆ ಸಾಕ್ ಅವು ಅವಾಗೇ... ಕರೆ ಕರೆಗೆ ಹೋಗಿ... ಹಸ್, ಕರ್‌ಗೆ ಮೊಲೆಉಂಬಕೆ ಬುಟ್ಪಾಂಗೆ... ಒಡ್ಡ್‌ಸಿ ಕೊಟ್ಟ್ ಸುಮ್ಮಂಗಾತಿದ್ದೊ. ಒಂದ್ ಸರ್ತಿ ನಾನೂ ಇಂವನೊಟ್ಟಿಗೆ ಜೇನ್ ತೆಗೆಕೆ ಹೋಕನ ಒಂದ್ ಗುಂಡಿಕಡ್ಯ ನೆಳಹಾರಿ ಬಂದ್ ನನ್ನ ದುಂಡುಗೆ ಕುಟ್ಟಿತ್. ಅವಂಗೆ

ಏನೂ ಮಾಡ್ತ್‌ಲೆ. ಶೇಕಲಪ್ಪ ಎಲ್ಲಿಂದಳೋ ಓಡಿ ಹೋಗಿ ಚೂರಿ ಸೊಪ್ಪುನ ತಂದ್ ಪಿಣ್‌ಂಚಿ; ನೆಳ ಕಚ್ಚಿದ ಜಾಗೆಂದ ಒಂದ್ ಸೀಂಕ್‌ನಾಂಗಿದ್ದ ಮುಳ್ಳ್‌ನ ತೆಗ್ದ್ ನನ್ನ ದುಂಡುಗೆ ಅಮುರ್ಸಿ ಹಿಡ್ದ್ ಚೂರಿ ಸೊಪ್ಪುನ ರಸ ಉಜ್ಜಿತ್ ಬಾಪೂ... ಇಲ್ಲೆ ಬೇನೆನೂ... ಇಲ್ಲೆ! ಇದೇನ್ ಮಾರಾಯ ಹೀಂಗೇಂತೇಳ್ರೆ ಅಂವ ಇಟ್ಟಿ ಮೀಸೆ ಕೊಡಿಂದ ನೆಗಾಡ್ದು ಬುಟ್ರೆ ಬೇರೆ ಉಸ್ಕುಡಮ್ಮು ತೆಗಿದುಲೆ.

ಹಾಂಗಾಗಿ ನನ್ನ ಹೆಂಗ್‌ಸ್‌ನ ಉಪದ್ರನ ತಡಿಯಕೆ ಬೊತ್ತದೆ ಒಮ್ಮೆ ಆ ಜೇನ್‌ನ ಅವನ ಕೈಂದ ತೆಗ್ಸಿ ಇದರ ಆಸೆನ ತೀರ್ಸನೊ ತೇಳಿ ಮಾಣ್‌ಂದಿನ ಬೊಳ್ಪು ಬೊಳ್ಪಾಕನನೇ ಸೇಕಲಪ್ಪನ ಬೀಡಾರಕ್ಕಲೆ ಹೋಗಿ ಕುದ್ದೆ. ನಾ ಕರಿವ ಸೊರಕೇಳಿ ಅವನ ಅಯ್ಯೆ ಕಟ್ಟಿದ ನೆರ್ಕೆ ಬಾಗ್ಲ್‌ನ ಕುರ್ರ್‌ಟಂತ ಎಳ್ದ್ ಏಂಟಿಕಂಡ್... ಏಂಟಿಕಂಡ್ ಹೊರಗೆ ಬಾತ್. ಬಂದಾಂಗೆ ಕೇಳ್ದೆ "ನಿನ್ನ ಮಂಜ ಸೇಕಲ ಎತ್ತೋಗುಟ್ಟು ಕಾಣದೆ ಸುಮಾರ್ ದಿನ ಆತ್ ಏನಾತ್ ಅವಂಗೆ." "ಉಳ್ಳಾಯ ಅದ್ ಅಂವ ಬೊಳ್ಪಾಕನ ಎದ್ದ್ ಗಾಳಕ್ಕೆ ಹೋದರೆ ಬಾದು ನಡಿರ್ಲ್... ಮೂರ್ ದಿನ ಆತ್ ಇಂದ್‌ಗೆ ಹೀಂಗೆ... ಬೀಡಾರಲಿ ಒಂದ್ ಪುಂಡಿ ತಣಿಯಣ ಕೂಡಾ ಉಂಬೊಲ್ಲೆ. ಯಾಕೇಂತೇಳ್ರೆ ಬಾಯೇ ಬುಡ್ದುಲೆ. ಈಗ ಗುಡ್ಯೋದ್ದ್ ಮೊಲ್ಗಿಟ್ಟು. ನಾ ಕರ್ದರೆ ಎದ್ರಿಕಿಲೆ. ನೀವು ಕರ್ದರೆ ಎದ್ದುದ್ರುರ್ಸ." ನಂಗೆ ಹನೀಸ್ ಬೆಚ್ಚ ಆತ್. ಆದರೂ ಹೇಂಗಾರ್ ಮಾಡಿ ಅವನ ಎದ್ರ್‌ಸೊಕು. ಅತ್ತಿತ್ತ ಮೆಲ್ಲ ಕಳ್ಳರಾಂಗೆ ತಿರ್ಗಿ ತಿರ್ಗಿ ನೋಡ್ದೆ. ಯಾರೂ ಕಂಡತ್ಲೆ. ನಂಗೆ ನನ್ನ ಕೆಲ್ಸನೇ ಮುಖ್ಯ ಆತ್. ಆಗ ಜಾತಿ, ನೀತಿ ಒಂದೂ ಮನ್ಸ್‌ಗೆ ಬಾತ್ಲೆ. ಅವನ ಬೀಡಾರದೊಳಗೆ ಹೋಗಿ ಅವನ ಎದ್ದ್‌ರ್ಸಿ ಕುದ್ದುರ್ಸುದೊಂದೇ ದಾರಿ. ಹಾಂಗೇ ಮೆಲ್ಲ ಅಂವ ಮೊಲ್ಗುವ ಕೊಂಬರಲ್ಲದ ಕೊಂಬಾರ್ಗೆ ಹುಕ್ಕ್ "ಶೇಕಲಾ..." ಅಂತ ಜೋರ್ ಕರ್ದೆ..! ನನ್ನ ಸೊರ ಅವನ ಕೆಬಿಕೆ ಕೇಳ್ದೇ ತಡ ಆರಡಿ ಸರ್‌ನ ಬೊಗ್ಗ್‌ಸಿ ಬೆಂಡ್ ಮಾಡಿ ಸುರ್ಂಬಿ ಮೊಲ್ಗಿದ ಜೀವ ತುಬುಕ್ಕಂತ ನಾಯೆ ಕೊಡ್ಕಿ ಎದ್ದಾಂಗೆ ಎದ್ದ್ ಕುದ್ದ್ "ಉಳ್ಳಾಯ ನೀವೇನ್ ಇಲ್ಲಿ..? ನೀವು ಹೀಂಗೆಲ್ಲ ನಮ್ಮ ಬೀಡಾರಕ್ಕೆ ಬಾಕೆ ಆಗದ್"ತೇಳಿ ಮನ್ಸ್‌ಲೇ ಏನೋ ತೊಪ್ಪು ಮಾಡ್ದವರಾಂಗೆ ನೆನ್ಸಿಕಂಡ್ ಅಲ್ಲೇ ತಲೆಗಡಿಗಿಸಿ ಮೊಲ್ಗಿದ ಮಣೆನ ನಂಗೆ ಕೊಟ್ಟ್ ಸೀದಾ ಒಲೆ ಬುಡಕ್ಕೆ ಹೋಗಿ ಒಂದ್ ಮೊಸಿ ತುಂಡ್‌ನ ಕರಕರ ಅಗ್ದ್ ಹೊಡಿ ಮಾಡಿ...; ಎಲಾಡ್ಕೆ ಕರೆ ಹಿಡ್ದ್ ನೋಡಿಕೆ ಬೊತ್ತದ ಹಲ್ಲ್‌ನ ತಿಕ್ಕಿ ಮೋರೆಗೆ ನೀಡ್ ಚೋಂಪಿಕಂಡ್ ಸೀರ್ತುಂಡ್‌ಲಿ ಸೆಂಡಿ ತೆಗ್ದ್ ಚುರ್ಕರ ಕುದ್ದತ್.

"ಅಲ್ಲಾ ಮಾರಾಯಾ ಕಾಂಬಕೇ ಇಲ್ಲೆ. ಎಲ್ಯಾರ್ ಸತ್ತ್‌ಮಿನಿ ಹೋದನಾಂತ ನಿನ್ನ ಹುಡ್ಕೆಂಡ್ ಬಂದದ್. ನಮ್ಮ ಅದ್ರ್‌ಕರೆಲಿ ಒಂದ್ ಜೇನ್ ಕುದ್ದುಟ್ಟು. ಒಮ್ಮೆ ಅದರ ತೆಗ್ದ್ ಕೊಡೊಂತ ಕೇಳಿಕೆ ಬಂದದ್. ಒಂದ್ ಅರ್ದಗಂಟೆ ಬಂದೋಗು ನೀ..."

"ಅಯ್ಯೋ ಉಳ್ಳಾಯ ಈಗ ಸದ್ಯಕ್ಕೆ ಆಕಿಲೆ. ನಾ ಬಾರೀ ಇಕ್ಕ್‌ಡಿಲಿ ಸೆಕ್ಕೆಂಡಳೆ. ಆ

ಕೆಲ್ಸ ಕೈದ್ ಆದಾಂಗೆ ನಾ ಬಂದ್ ತೆಗ್ದ್ ಕೊಟ್ಟನೆ. ಇಂದ್, ನಾಳೆ, ನಾಳ್ದಾಕೂ ಸಾಕ್. ಹಾಂಗಾಗಿ ನೀವು ಹನೀಸ್ ಪಾರಕಾಯೊಕು ಉಳ್ಳಾಯ. ಅಂಥ ಕಡ್‌ಂಗ ಕಡಿವ ಕೆಲ್ಸ ಅಲ್ಲದಿದ್ದರೂ ನಾ ಬಂದ್ ಹಾವುಮೀನ್‌ನ ಹಿಡ್ದ್ ಮೇಗಡೆ ಮಂಜ ಎಟ್ಯಾಳ್‌ಗೆ ಕೊಡೊಕು. ಗಾಳಕ್ಕೆ ಹೋಗೇ... ಹೋಕು. ಈಗ ಬಾಕೆ ಆಕಿಲೆ... ಆಕೇಲೇ..." ಅಂತ ಕಡ್ಡಿ ಮುರ್ದಾಂಗೆ ಹೇಳ್ತ್."

"ಅಲ್ಲ ಮಾರಾಯ ಅವ್ಕೆ ಈಗ ಯಾಕೆ ಗಡ, ಅಂಥಾ ಅರ್ಜೆಂಟ್‌ಲಿ ಹಾವುಮೀನ್... ಇನ್ನೂ ದಿನ ಉಟ್ಟಲ್ಲ. ನಂಗೆ ಒಂದ್ ಅರ್ದಗಂಟೆ ಅಟ್ಟೇ... ಒಮ್ಮೆ ಮಾಡಿಕೊಡು ಶೇಕಲಾ..."

"ಅರ್ಧಗಂಟೆ ಅಲ್ಲ ಐದ್ ಮಿನಿಟ್ ಕೂಡಾ ನಂಗೆ ಬಾಕೆ ಆಕಿಲೆ. ಈ ಸಂಗತಿ ಬೇರೆ ಯಾರಿಗೂ ಗೊತ್ತ್ಲೆ. ನಾ ನೀವ್ಗೆ ಮಾತ್ರ ಹೇಳ್ನೆ ಕೇಳಿ;" ತೇಳಿ ಹನೀಸ್ ಸೊರ ತಗ್ಗ್‌ಸಿ ಹೇಳ್ತ್ "ಮೇಗಡೆ ಮನೆ ಮಂಜ ಎಟ್ಯಾಳ್ ಒಳೋ ಅಲ್ಲಾ... ಅವ್ಕೆ ಹೊರ್ಕಡೆ ಚೋಡಿಗೆ ಕುದ್ರುಕನ ಆಸನ ಹೊರಗೆ ಬಾದುಗಡ ಉಳ್ಳಾಯ...! ಅದ್ಕೆ ಒಂದ್ ಹಾವು ಮೀನ್ ಹಿಡ್ದ್ ಕೊಡಕಡ."

"ಅಲ್ಲ ಶೇಕಲಾ... ಆಸನ ಹೊರಗೆ ಬಾದಕ್ಕೆ ಅಂವನ ಆಸ್ಪತ್ರೆಗೆ ಹೋಗಿ ಡಾಕ್ಟ್ರ್‌ಗೆ ತೋರ್ಸಿಕೆ ಹೇಳ್... ಇಲ್ಲೆ ಪಥ್ಯ ಮಾಡಿಕೆ ಹೇಳ್, ಅದ್ ಬುಟ್ಟ್ ಹಾವು ಮೀನ್ ತಿಂದರೆ ಸೆರಿ ಆದೆನಾ...?

"ಶ್..ಶ್ss... ಉಳ್ಳಾಯ ಅಟ್ಟ್ ಜೋರ್ ಮಾತಾಡ್ಬಡಿ... ಸಂಗತಿ ಯಾರಿಗಾರ್ ಗೊತ್ತಾಗಿ ಕೇಳ್ಸಿಕಂಡ್ರೆ ಕಷ್ಟ... ಡಾಟ್ರ್‌ಗೆ ತೋರ್ಸಿ ಹೇಳಿಕಂಕೆ... ನಾಚಿಕೆ ಅಲ್ಲಾ... ನೀವ್ಗೆ ಗೊತ್ತ್ಲೆ ಉಳ್ಳಾಯ ಹಾವು ಮೀನ್ ಅದ್ಕೆ ಭಾರೀ... ಮೊದ್ದ್ ಅದರ್ಲಿ ಒಂದ್ ನೋಳಿ... ನೋಳಿನಾಂಗೆ ಒಂದ್ ಮೊದ್ದಿದ್ದದೆ ಅದರ ತೆಗ್ದ್ ಅದರ್ಲಿ ಗಂಜಿ ಮಾಡಿ ಉಣಕಡ ಉಳ್ಳಾಯ!" ಅಂವನ ಮಾತ್ ಕೇಳಿನೇ ನಂಗೆ ವಾಂಕ್ರಿಕ್ಕೆ ಬಂದಂಗಾಗಿ ಹೊಟ್ಟೆ ತೊಳ್ಸಿದಾಂಗೆ ಆತ್. ಅದೂ ಅಲ್ಲದೆ ಅಂವ ದೊಡ್ಡಾ ವೈದ್ಯಗಾರ ಪೊಂಡಿತನಾಂಗೆ ಮಾತಾಡ್ದರ ಕಂಡ್ ಹನೀಸ್ ಸಿಟ್ಟ್ಹೊ... ಬಾತ್.

"ಅದ್ ಸರಿ ಸೇಕಲಾ... ಈ ಹಾವು ಮೀನ್‌ಲಿ ಅಂಥಾ ಮೊದ್ದುಟ್ಟೊಂತ ನಿಂಗೆ ಯಾರ್ ಹೇಳ್ದೊ... ಬೇರೆ ಮೀನ್‌ಗಳ್ಲಿ ಇಲ್ಲೆನಾ..." ನಂದೊಂದ್ ಬಾಣ ಬುಟ್ಟೆ.

"ಓ... ದೇ..ವ..ರೇ.... ಈ ಇಸಯ ಎಲ್ಲೊವ್ಕೂ ಗೊತ್ತುಟ್ಟು, ಆದರೆ ಯಾರೂ ಹೇಳಿಕಂಬೊಲ್ಲೆ. ನಂಗೆ ನನ್ನಪ್ಪ ಹೇಳಿದ್ದೊ; ಮಂಜಪ್ಪ ಎಟ್ಯಾಳ್‌ಗೆ ಯಾರೋ ಅವರ ನಂಟ್ರ್‌ಗ ಹೇಳ್ದೊ ಗಡ. ಬೇರೆ ಮೀನ್‌ಗಳೂ... ಒಂದೊಂದ್ ಒಂದೊಂದ್ ಮೊದ್ದಿಗೆ ಆದೆ..! ಹಾಂಗೆ

ಮನ್ನೆ ಬೊಳ್ಪಾಕನ ಅಂವು ನನ್ನ ಹುಡ್ಕೆಂಡ್ ಬಂದ್ ಹೇಂಗಾರ್ ಒಂದ್ ಹಾವು ಮೀನ್ ಹಿಡ್ಡ್‌ಕೊಡೂಂತ ಹೇಳಿ ನೂರಡ್ಕೆನೂ... ನೂರರ ಮೂರ್ ನೋಟುನೂ... ಕೊಟ್ಟೋಗಳೋ! ಮನ್ನೆಂದ ಬುಡಾದೆ... ಹಗ್ಲ್ ರಾತ್ರೇಂತ ಇಡೀ ಹಳ್ಳನ ಸಾರ್ತಾ ಒಳೆ. ನನ್ನ ಗ್ರಾಚಾರಕ್ಕೆ ಹಾವು ಮೀನ್ ಬುಡಿ... ಒಂದ್ ಚೆರ್ಗ್ ಕೂಡಾ ಗಾಳಕ್ಕೆ ಕಚ್ತಾ ಇಲ್ಲೆ. ಪಾಪ... ಅಂಥ ಒಳ್ಳ ಮೊಯಿಂಸಂಗೆ ಹಾಂಗೆ ಆಕೆ ಬೊತ್ತಾಗಿತ್ತ್. ನನ್ನ ಅಕ್ಕನ ಮೊದ್ಯೆಗೆ ಕೂಡಾ ಅವು ಬಾರೀ ಸಾಯ ಮಾಡ್ಯಳೊ. ಅದೂ ಅಲ್ಲದೆ ನನ್ನ ಜೀವ ಹೋದರೂ ಸೆರಿ ನೀವ್ಗೆ ಹೇಂಗಾರ್ ಮಾಡಿ ಹಾವ್ಮೀನ್ ಹಿಡ್ದ್ ಕೊಟ್ಟನೇಂತ ಆಣೆ ಮಾಡಿ ಹೇಳ್ಯಳೆ ಉಳ್ಳಾಯ! ಈ ಸಂಗತಿ ನೀವ್ಗೆ ಮಾತ್ರ ನಾ ಹೇಳ್ದ್ ಯಾರಿಗೂ... ಹೇಳಿಕೆ ಹೋಬಡಿ..!

"ಆತ್ ಮಾರಾಯಾ... ನೀನೂ... ನಿನ್ನ ಹಾವು ಮೀನೂ... ಮಂಜನ ಆಸನ ಹೊರಗೆ ಬಾದೂ... ಎಲ್ಲ ಡೊಂಡಂಡ... ಸಾರಿಕಂಡ್ ಊರ್ತುಂಬಾ ಹೇಳಿಕಂಡ್ ಹೋದೇ ನನ್ನ ಕೆಲ್ಸಾಂತ ನೀ... ತಿಳ್ಕಂಡನಾ... ಹೇಂಗೆ..?" "ಅಲ್ಲ... ಆದರೂ... ಎಲ್ಯಾರ್ ಬಾಯಿತೊಪ್ಪಿ..!"

ಶೇಕಲಪ್ಪಂಗೆ ನನ್ನ ಮೇಲೆ ನಂಬಿಕೆ ಬಾತ್ಲೆಂತ ಕಂಡದೆ. ಈಗನ ಕಾಲಲಿ ದುಡ್ಡ್ ಕೊಟ್ರೆ ಎಂತೆಂತದೋ... ಹೇಳಿಕಣಿಕಾಗದ, ನೆನ್ಸಿಕಣಿಕಾಗದ ಕಾಯಿಲೆಗಳ್ಗೆ ಬೇಕ್ ಬೇಕಾದ ಮೊದ್ದ್, ಬೇಕ್ ಬೇಕಾದ ಡಾಕ್ಟ್ರ್‌ಗ ಒಳೊ. ಅಂತದರ್ಲಿ ಮಂಜನ ಈ ಚಿಲ್ರೆ ಪೈಲ್ಸ್‌ನಂಥಾ ಕಾಯಿಲೆಗೆ ಹಾವು ಮೀನ್‌ನ ಮೊದ್ದ್ ಮಾಡಿಕೆ ಹೊರ್ಟುಟ್ಟು. ಎಲ್ಲೋ... ಮಂಜಂಗೋ... ಅಲ್ಲ ಈ ಮೀನ್‌ಮುಕ್ಕ ಶೇಕಲಪ್ಪಂಗೆ ಮೊರ್ಲು ಸುರಾಗಿರೊಕುತ ನೆನ್ಸಿಕಂಡ್... ಮಂಜ ಕೊಟ್ಟ ಅಡ್ಕೆಗೋ... ಅಲ್ಲ ನೋಟುನ ರುಚಿಗೋ... ಮಂಜ ಬಾರೀ ಒಳ್ಳಂವ ಅಂತ ಸರ್ಟಿಫಿಕೇಟ್ ಕೊಟ್ಟದರ ನೋಡಿ "ಆತ್ ಮಾರಾಯ... ನಿನ್ನಾಣೆಗೂ.... ಯಾರಿಗೂ ಹೇಳ್ದುಲೆ. ಆದರೆ ಒಂದ್ ಸಂಗತಿ ನೀ ಹೇಳ್ದ ಇಸಯನ ಯಾರಿಗಾರ್ ಹೇಳದೆ ಇರೊಕುತಿದ್ದರೆ ನೀ ಬಂದ್ ನಂಗೆ ಜೇನ್ ತೆಗ್ದ್ ಕೊಡೊಕು ಇಲ್ಲರೆ ಈ ಸಂಗತಿನ ನಾ ಎಲ್ಲೊವ್ಕೂ ಹೇಳ್ವೆ"ತೇಳಿ ಒಂದ್ ಕೆಣಿ ಮಾಡಿ ಹನೀಸ್ ಹೆದ್ರಿಕೆ ಹುಟ್ಸಿ ನಾ ಮನೆಗೆ ಬಂದೆ.

ಅದೇ ದಿನ ಕತ್ತಲೆ–ಕತ್ತಲೆ ಆಕನ ಶೇಕಲಪ್ಪ ಓಡಿಕಂಡ್ ಬಂದ್ ಉದ್ಗೀಲ್ ಕರೆಂದಳೇ "ಉಳ್ಳಾಯ... ಓ ಉಳ್ಳಾಯಂತ" ಕರಿದು ಕೇಳ್ತ್. ನಂಗೆ ಮನ್ಸೊಳಗೇ... ಒಂದ್ ಕುಸೀ ಆತ್. ಓ... ಶೇಕಲಪ್ಪಂಗೆ ಹಾವು ಮೀನ್ ಸಿಕ್ಕಿರೊಕು! ಇನ್ನ್ ಇಂವ ಜೇನ್ ತೆಗಿದಲ್ಲದೆ ಬೇರೆ ಕೆಲ್ಸಕ್ಕೂ ಸಿಕ್ಕುದೂಂತ ನೆನ್ಸಿಕಂಡೆ. ಅಂವ ಜಾಲ್ ಕರೆಗೆ ಬಂದಾಂಗೇ... "ಬೇಗ ಒಂದ್ ಪಿಕಾಸ್, ಕತ್ತಿ ಮತ್ತೆ ಜೇನ್ ಹಾಕಿಕೆ ಪಾತ್ರನೂ... ತಕಂಡ್ ಬನ್ನೀ... ಜಾಸ್ತಿ ಕತ್ತಲೆ ಆದರೆ ಜೇನ್ ತಿಂಬಕ್ಕೆ ಹರಿವ ಜೀವಾದಿಗ ಬಂದವೆ. ಹಾಂಗಾಗಿ ಆದಟ್ಟ್ ಬೇಗ ಕೆಲ್ಸ ಮುಗ್ಸೊಕು ತೇಳಿ ನಂಗೇ ಬುದ್ಧಿ ಹೇಳಿ ಅಂಬೇರ್ಪು ಮಾಡ್ತ್! ಶೇಕಲನ ಮಾತ್ ಕೇಳ್ದ

ನನ್ನ ಹೆಂಗ್‌ಸ್ ಎಲ್ಲಿ ಇತ್ತೋ ಗೊತ್ತೆ ಇಚ್ಚಿರ್‌ಬಡಿ-ಇಂಜಿರ್‌ಬೆಡಿ ತೇಳಿ ಎಲ್ಲಾ ಹತಿವಾರ್‍ಗಳ ತಕಂಡ್ ಬಂದ್ ಹಾಕಿ ಬೇಗ ಬೇಗ ಹೋಗೀಂತ... ಇನ್ನೂ ಗಡಿಬಿಡಿ ಮಾಡ್ತ್.

ಅಂತೂ ಅಕೇರಿಗೂ... ಜೇನ್ ತೆಗಿವ ಜಂಬರ ಮುಗ್ತ್. ನೋಡ್ರೆ ಒಂದ್ ಇಡ್ಲಿ ಪಾತರ ತುಂಬ ಜೇನೇ...!! ಸೇಕಲಪ್ಪನ ಹಾಂಗೂ ಹೀಂಗೂ... ನೈಸ್ ಪಾಲಿಸ್ ಮಾಡಿ "ಭಾರೀ ಉಪಕಾರ ಆತ್ ಮಾರಾಯ... ಏನೋ ಆಚೆ ಮನೆವು ಮಿನಿ ನೋಡಿದರೆ ನಾವ್ಗೆ ಏನೂ ಇತ್ಲೆಬಲ" ತೇಳಿ ನೂರರ ಒಂದ್ ನೋಟುನ ಅಂವನ ಕೈಲಿಸಿ ಹನೀಸ್ ಜೇನೆರಿನ ಬಾಚಿಕೊಟ್ಟ್ "ಅಲ್ಲ... ಶೇಕಲಾ... ನೀ ಹಾವು ಮೀನ್ ಸಿಕ್ಕದೆ ಇತ್ತಕಡೆ ತಲೆಹಾಕಿಕಿಲೆ ತೇಳ್ದ.. ಅಟ್ಟ್‌ಬೇಗ ನಿಂಗೆ ಸಿಕ್ಕಿಬುಡ್ತಾ ಅದ್ ಹ್ಲಾ..." "ಅಯ್ಯೋ ಉಳ್ಳಾಯ ಹಾವು ಮೀನ್ ಎಲ್ಲಿಂದ ಸಿಕ್ಕಿದೆ ಹೇಳಿ; ಹಾಂಗೆ ಸಿಕ್ಕಿಕೆ ಅದರ ನಾ ಕಟ್ಟಿ ಹಾಕಿ ಬಂದಳೆನಾ... ಹೇಳಿ?" ಅಂತ ತಿರ್‍ಗಾ ನಂಗೇ ಕೊಷ್ಣೆ ಹಾಕಿತ್. "ಮತ್ತೇ ನೀ ಯಾಕೆ ಬಂದ... ಬೊಳ್ಳಿಗೆ ದೊಡ್ಡದೊಡ್ಡದ್ ಬುಟ್ಟ ಮತ್ತೆ...?"

"ಹೌದು ಉಳ್ಳಾಯ ಬೊಳ್ಳಿಗೆ ದೊಡ್ಡ ದೊಡ್ಡದ್ ಬುಟ್ಟದರ್ಲ್ಲಿ ಹನೀಸ್ ಜಾಸ್ತಿನೇ ಆಗಿಹೋತ್. ಮಂಜ ಎಟ್ಯಾಳ್ಗೆ ಕಾಯಿಲೇಂತ ಹೇಳ್ದೆ. ಇದುವರೆಗೂ... ಅವರ ಮನೆವ್ಕೆ ಮತ್ತೆ ನಂಗೆ ಈ ಸಂಗತಿ ಬುಟ್ರೆ ಮೂರ್ನೆಂವ ತೇಳಿ ನೀವ್ಗೆ ಮಾತ್ರ ಈ ಇಸಯನ ಹೇಳ್ದ್. ನೀವು ಎಲ್ಯಾರ್ ಜೇನ್ ತೆಗ್ದ್ ಕೊಡದ ಸಿಟ್ಟ್‌ಲಿ ಯಾರಾರಿಗೆ ಬಾಯೆತೊಪ್ಪಿ ಹೇಳ್ರೆ... ಅದೂ ಅಲ್ಲದೆ ಜೇನ್ ತೆಗ್ದ್ ಕೊಡದಿದ್ದರೆ ಈ ಸಂಗತಿನ ಎಲ್ಲೊವ್ಕೆ ಹೇಳ್ನೇಂತ ಹೇಳಿದ್ದರಿ... ಹಾಂಗಾಗಿ ಅಂಥಾ ಪಾಪದ ಮೊಯಿಂಸ ನನ್ನ ಮೇಲೆ ಇಸಿದ ಇಸ್ವಾಸನ ನಾ ಕಳ್ಕಂಬಕೆ ತಯಾರಿಲ್ಲೆ. ಪಾಪ ಇನಾ ಕಾರಣ ಅವರ ಮೊರ್ಯಾದಿ ಹೋದರೆ ಛೇ... ಎಂಥಾ ಕೆಲ್ಸ ಆತಿತ್ತ್... ಅದ್ಕೆ ನೀವು ಎಲ್ಯಾರ್ ಬಾಯಿ ಬುಟ್ರೆತೇಳಿ ಗಾಳನ ಪಡದ ದೈಗೆ ಕಟ್ಟಿ ಇಸಿ ಓಡಿಕಂಡ್ ಬಂದದ್. ದಯಮಾಡಿ ಈ ಸಂಗತಿ ಯಾರಿಗೂ...ಹೇಳ್ಬಡಿ"ತೇಳಿ ಶೇಕಲಪ್ಪ ಕೈಮುಗ್ತ್...!

"ಅಯ್ಯೋ... ಶೇಕಲಾ.... ಮಾರಾಯಾ... ನಾ ತಮಾಸಿಗೆ ಹೇಳ್ದ ಬಲಾ...!! ನಿಂಗೆ ನನ್ನ ಮೇಲೆ ನಂಬಿಕೆ ಇಲ್ಲೆನಾ.. ಹೇಂಗೆ ಹೇಳ್..?

"ಅಲ್ಲ ಉಳ್ಳಾಯ ನಂಬಿಕುಟ್ಟು ಆದರೂ... ಮೊಯಿಂಸನ ಹೇಂಗೆ ಹೇಳ್ದು ಹೇಳಿ...!?" ತೇಳಿ ಶೇಕಲಪ್ಪ ಹೊರ್‍ಟೋತ್.

ಬೆರಿ ನಂಗೆ ಮಾತ್ರ ಅಲ್ಲದೇ ಇಡೀ ಮೊನ್ನ ಕುಲಕ್ಕೇ... ನಡ್ತೆನ ಸರ್ಟಿಫಿಕೇಟ್ ಕೊಟ್ಟ ಶೇಕಲಪ್ಪನ ನೆನ್ಸಿ ಮೋರೆ ಚಪ್ಪೆ ಮಾಡಿಕಂಡ್ ಸೀಂಜೇನ್ ಪಾತ್ರನ ತಕಂಡ್ ನಾ ಮನೆ ಒಳೆಗೆ ಹೋದೆ...!

***



# ಪೆನ್ನುದಿ

ಹೈದ ಲೋಕೇಶ್ ಊರುಬೈಲು ಇವು ಬರ್ದ ಕತೆಗಳ ಪತ್ರಿಕೆಲಿ ಓದಿದ್ದೆ ಮತ್ತೆ ಮಡಿಕೇರಿ ಆಕಾಶವಾಣಿಲಿ ಕೇಳಿದ್ದೆ. ಇವು ಬರಿವ ಹೆಚ್ಚಿನ ಕತೆಗ ನಮ್ಮ ಬೊಡ್ಡಿಗೆ ಬಾರಿ ಹಕ್ಕಲೆ ಇರುವ ಥರಾ ಉಟ್ಟು. ಹಂಗಾಗಿ ನಾಬಿಬ್ಬರು ಮಾತಾಡಿ ಅವು ಬರ್ದ ಅರೆಬಾಷೆ ಕತೆಗಳ ಎಲ್ಲಾ ಸೇರ್ಸಿ ಒಂದು ಪುಸ್ತಕ ಮಾಡೊಕೂಂತ ತೀರ್ಮಾನಿಸಿ 'ಗುಬ್ಬಿ ಗೂಡೆ' ಪುಸ್ತಕ ನಮ್ಮ ಪ್ರಕಾಶನಲಿ ಅಚ್ಚ್ ಹಾಕ್ಸೊಲೊ. ಅರೆಬಾಷೆನ ಕನ್ನಡ ಲಿಪಿಲಿ ಜೋಡ್ಸುವ ಕೆಲಸನ ನಮ್ಮ ಪ್ರಕಾಶನದ ಸಿಬ್ಬಂದಿಗ ಮತ್ತೆ ನಾ ತಪ್ಪಾಗದೆ ಜಾಗ್ರತೆಲಿ ಮಾಡಿಯೊಲೊ. ಕಾರಣ ನಾವು ಈವರೆಗೂ ಹಲವು ಪುಸ್ತಕ ಮುದ್ರಿಸಿದರಿಂದ ಈ ಯಶಸ್ಸು ಕಾಂಬಕೆ ಆತ್.

ನಮ್ಮ ಎಲ್ಲಾ ಓದುಗರ್ ಈ ಕತೆನ ಓದಿ ಹೈದಂಗೆ ಸಲಹೆ ಕೊಡಿ. ಅರೆಬಾಷೆಲಿ ಒಂದಷ್ಟ್ ಸಾಹಿತ್ಯ ಬಾಕೆ ಈ ಪುಸ್ತಕ ಕೂಡಾ ಒಂದ್ ನೆವನ ಆಗಲಿ ಅಂತ ಬಯಸಿನೆ. ಸಾಹಿತ್ಯಕ್ಕೆ ಸಂಸ್ಕೃತಿಗೆ ಒಂದು ಬೆಂಬಲ ಕೊಟ್ಟ್, ಇನ್ನೂ ಎತ್ತರಕೆ ಏರಿಕೆ ಇದರ್ಲಿ ದುಡಿಯಕ್ಕೆ ಹರ್ಸಿ ಅಂತ ಕೇಳಿಕಂಡ್ ನಮ್ಮ ಕುಲದೇವ್ರಾದ ಶ್ರೀ ವೆಂಕಟ್ರಮಣನಕ್ಕಲೆ ಬೇಡಿಕಣೆ.

–ಗಂಗಾಧರ ಡಿ.